# ಸಿದ್ಧಗಂಗಾ

ಸಂಪುಟ ೨೪ ಸಂಚಿಕೆ–೩-೪ ಮಾರ್ಚಿ, ಎಪ್ರಿಲ್ ೧೯೮೮

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಮುತ್ತು ಕಳೆದರೆ ಮತ್ತೆ ಪಡೆಯಬಹುದೆಂದೆ ನೀ
ಹೊತ್ತು ಕಳೆದರೆ ಮತ್ತೆ ಗಳಿಸಲುಂಟೆ । ಎಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಮರದಲ್ಲಿ ಮಡುವಲ್ಲಿ ದೈವಕಾಣುವ ನರರು
ಮನುಜರಲಿ ದೈವವ ಕಾಣರೇಕೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ನಾಯಿ ಹಂದಿಗಳಲ್ಲಿ ದೈವ ಕಾಣುವನರರು
ಮನುಜರಲಿದೈವವ ಕಾಣರೇಕೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್. ವಿ. ವೀರಭದ್ರಯ್ಯ.

# ಈ ಸಂಚಿಕೆಯಲ್ಲಿ

# ಶ್ರೀವಾಣಿ



ಭಗಂವತನು ಸಕಲ ಚರಾಚರ ವಸ್ತುವನ್ನು ನಿರ್ಮಾಣ ಮಾಡಿದ. ಆ ಸೃಷ್ಟಿಕಾರ್ಯ ಅಸಾಧಾರಣ ಹಾಗೂ ಅದ್ಭುತವಾದುದು. ವಸ್ತು, ವ್ಯಕ್ತಿ, ಪ್ರಾಣಿ ಮೊದಲಾದ ಸರ್ವ ಜಗತ್ತಿಗೂ ಗಾತ್ರ,ವ್ಯಕ್ತಿತ್ವ ಪರಿಮಾಣಗಳನ್ನನುಸರಿಸಿ ಶಕ್ತಿ ಸಾಮರ್ಥ್ಯಗಳನ್ನು ಕರುಣಿಸಿದ. ತಮ್ಮ ತಮ್ಮ ಬುದ್ದಿ ಮತ್ತು ಕರ್ಮಾನುಗುಣವಾಗಿ ಹುಟ್ಟು ಸಾವಿನೊಡನೆ ಜಗತ್ತಿನ ಪ್ರಾಣಿ ಹೋರಾಟ ಮಾಡಲು ಪ್ರಯತ್ನಿಸಿತು. ಜೀವನ ಸಾಗಿಸಲು ನಿರಂತರ ಪ್ರಯತ್ನ ಶೀಲವಾಯಿತು. ಪ್ರಾಣಿ ಜಗತ್ತಿನಲ್ಲಿ ಮನುಷ್ಯನು ಬುದ್ಧಿವಂತನಾದರೂ ಪ್ರಾಣಿ ಸಹಜವಾದ ಕೆಲವು ನೈಸರ್ಗಿಕ ಗುಣಗಳಿಂದ ಹೊರಬರದೆ ತನ್ನ ಸ್ವಾರ್ಥ ಮತ್ತು ಸಂಕುಚಿತ ಗುಣಗಳಿಂದ ಬಡಿದಾಡುತ್ತಾನೆ. ತಾನು ತನ್ನ ಮನೆ, ಮಠ, ತನ್ನವರು ಎಂಬ ಕ್ಷುಲ್ಲಕ ಗುಣಗಳಿಂದಾಗಿ ಮಾನವೀಯ ಗುಣವನ್ನು ಮರೆಯುತ್ತಾನೆ. ಮನುಷ್ಯತ್ವ ವನ್ನು ಮರೆತು ಮೃಗತ್ವವನ್ನು ಪ್ರದರ್ಶಿಸುತ್ತಾನೆ. ಮಾನವರಲ್ಲಿ ಕೆಲವರು ಪ್ರಾಣಿ ಜಗತ್ತನ್ನು ಮೀರಿ ಬೆಳಗಿದರೆ, ಕೆಲವರು ಪ್ರಾಣಿಗಿಂತಲೂ ಕೀಳಾಗುತ್ತಾರೆ, ಬಲ್ಲವರು ಈ ಸ್ವಭಾವದ ಜನಗಳನ್ನು ಕಂಡು ಮೂರು ಗುಂಪುಗಳಾಗಿ ವಿಂಗಡಿಸಿದ್ದಾರೆ. ಜೀವನ ದಲ್ಲಿ ಪಶು ಜೀವನ. ವ್ಯಾಘ್ರಜೀವನ, ವ್ಯಾಳಜೀವನ. ಕ್ರಮವಾಗಿ ಉತ್ತಮ. ಮಧ್ಯಮ, ಅಧಮ ಎಂಬುದಾಗಿ ಹೇಳುತ್ತಾರೆ. ಪಶು ಜೀವನವೆಂದರೆ, ಪಶು ಎಂದರೆ ಗೋ ಎಂದರ್ಥ, ಗೋವು ತನ್ನನ್ನು ಸಾಕಿ ಸಲಹಿದ ಯಜಮಾನನಿಗೆ ಹಾಲನ್ನು ಕೊಡುತ್ತದೆ. ಗೋವು ಪರೋಪಕಾರದ ಪ್ರತಿರೂಪ. ಪ್ರತ್ಯುಪಕಾರ ಮಾಡುವ ಸ್ವಭಾವ, ತಾನು ಬದುಕಿ ಉಪಕಾರ ಮಾಡಿದವರೂ ಬದುಕಬೇಕೆಂಬ ಹಂಬಲವುಳ್ಳವರು ಉತ್ತಮ ಜೀವಿಗಳು. ವ್ಯಾಘ್ರ ಎಂದರೆ ಹುಲಿ, ಹುಲಿ ತಾನು ಬದುಕಲು ಮತ್ತೊಂದು ಗೋವು, ಹುಲ್ಲೆ ಮೊದಲಾದ ಸಾಧು ಪ್ರಾಣಿಗಳನ್ನು ಕೊಂದು ತಿಂದು ಬದುಕುತ್ತದೆ. ಇಲ್ಲಿ ತಾನು ಬದುಕಬೇಕೆ ಹೊರತು ಇನ್ನೊಂದರ ಪ್ರಾಣ ಹೋಮದರ ಪರಿವೆಯಿಲ್ಲ, ಇಲ್ಲಿ ಹೊಟ್ಟೆ ಹೊರೆಯುವುದೇ ಮುಖ್ಯಗುರಿ. ತನ್ನ ಬದುಕಿಗೆ ಮತ್ತೊಂದರ ಬಲಿ, ಇದು ಮಧ್ಯಮ. ಇಲ್ಲಿ ಸ್ವಾರ್ಥವಾದರೂ ಇದೆ. ಮೂರನೆಯದು ವ್ಯಾಳ ಜೀವನ. ವ್ಯಾಳವೆಂದರೆ ಘಟಸರ್ಪ, ಹಾವು. ಪ್ರಾಣಿಯನ್ನೊ. ಮನುಷ್ಯನನ್ನೋ ಹಾವು ಕಚ್ಚಿ ಸಾಯುವಂತೆ ಮಾಡುತ್ತಧೆ. ಇಲ್ಲಿ ಸ್ವಾರ್ಥ ಪ್ರಯೋಜನವೂ, ಇಲ್ಲ ವಿನಾಕಾರಣ ಮತ್ತೊಂದರ ಪ್ರಾಣಹಾನಿಗೆ ಕಾರಣವಾಗುತ್ತದೆ. ಆ ಒಂದು ಜೀವ ಸಾಯುವುದರಿಂದ ತನಗೂ ಪ್ರಯೋಜನವಿಲ್ಲ, ಬೇರಾವ ಪ್ರಯೋಜನವೂ ಇಲ್ಲ. ಇದು ವ್ಯರ್ಥವಾಗಿ ಪ್ರಾಣ ಹಾಳು ಮಾಡುವ ಪ್ರಯತ್ನ. ಇದು ಅಧಮ ಜೀವನ. ಇಂದು ಸಮಾಜದಲ್ಲಿ ಕಾಣುವ ಈ ಮೂರು ಗುಂಪಿನಲ್ಲಿ ಅಧಮ ಜೀವನ ನಡೆಸುವರೇ ಅಧಿಕವಾಗಿದ್ದಾರೆ. ವ್ಯರ್ಥ ವಾಗಿ ಸರ್ವವೂ ಹಾಳಾಗಿ ಹೋದರೂ ಚಿಂತೆಯಿಲ್ಲ. ತನ್ನ ದ್ವೇಷ. ಅಸೂಹೆ, ಕುಹುಕ ಹೊಟ್ಟೆಕಿಚ್ಚು, ಮಾತ್ಸರ್ಯ ಗೆಲ್ಲಬೇಕು. ಸಾರ್ವಜನಿಕ ಜೀವನಕ್ಕೆ ತೊಂದರೆ ಆದರೂ ಚಿಂತೆ ಯಿಲ್ಲ. ವಿಧ್ವಂಸಕ ಕೃತ್ಯವೇ ಸಾಗಬೇಕು. ಇದು ಅಮಾನವೀಯ, ಹಾಗೂ ಪೈಶಾಚಿಕ ಕೃತ್ಯವಲ್ಲದೆ ಬೇರೇನೂ ಅಲ್ಲ.

## ಸಿದ್ಧಗಂಗಾ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು

**ಪ್ರೊ|| ಚನ್ನಪ್ಪ ಎರೇಸೀಮೆ**

* * *

ಸಂಪಾದಕರು

**ಹೆಚ್. ವಿ. ವೀರಭದ್ರಯ್ಯ**

* * *

ಸಹ ಸಂಪಾದಕರು

**ಬಿ. ವೀರಭದ್ರಯ್ಯ**

**ಪಿ. ಎನ್. ಚಂದ್ರಶೇಖರಯ್ಯ**

* * *

ಜಾಹೀರಾತು ವಿಭಾಗ

**ಎಂ. ರೇಣುಕಾರಾಧ್ಯ**

* * *

ಪ್ರಸಾರ ವಿಭಾಗ

**ಆರ್. ಎಸ್. ಮಲ್ಲೇಶಪ್ಪ**

* * *

ಪ್ರಕಾಶಕರು

**ಹೆಚ್. ಬಿ. ಗಂಗಾಧರಯ್ಯ**

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

**ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ

**ಶ್ರೀ ಸಿದ್ಧಗಂಗಾ ಕ್ಷೇತ್ರ**

### ಚಂದಾ ವಿವರ

**ವಾರ್ಷಿಕ ಚಂದಾ 20 - 00 ರೂ.**

**ಅಜೀವ ಸದಸ್ಯತ್ವ 201 - 00 ರೂ**


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

**" ಸಂಪಾದಕರು "**

**'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ**

ಶ್ರೀ ಸಿದ್ಧಗಂಗಾ ಕ್ಷೇತ್ರ-572104

**ತುಮಕೂರು ಜಿಲ್ಲೆ.**

ಇವರಿಗೆ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

## ಚರಿತ್ರಾರ್ಹ ನಿರ್ಣಯ

ಶ್ರೀ ಸಿದ್ಧಗಂಗಾ ಮಠದ ಇತಿಹಾಸದಲ್ಲಿ ದಿನಾಂಕ 31-3-88 ಚರಿತ್ರಾರ್ಹ-ವಾದ ದಿನ. ಶ್ರೀ ಮಠದ ಸುಮಾರು ಏಳುನೂರು ವರ್ಷಗಳ ಇತಿಹಾಸದಲ್ಲಿ ಅಭೂತ ಪೂರ್ವವಾದ ದಿನ. ಸೇವಾ ಜೀವನದಲ್ಲಿ ದಾಖಲೆಗಳನ್ನೇ ಸ್ಥಾಪಿಸುತ್ತ ಬಂದ ಮಠ ಮತ್ತೊಂದು ಮಹತ್ವದ ದಾಖಲೆಯನ್ನು ಸ್ಥಾಪಿಸಿದ ಹೆಗ್ಗಳಿಕೆ.

ಶ್ರೀ ಮಠದ ಅಡಿಗಲ್ಲು ನೈತಿಕತೆ. ಧರ್ಮದ ಮೂಲವೂ ಅದೇ. ತತ್ವನಿಷ್ಠವಾದ ಪರಂಪರೆ. ಪಾವಿತ್ರ್ಯತೆಯನ್ನು ಸಂರಕ್ಷಿಸಿಕೊಂಡು ಬರುತ್ತಿರುವ ಅಖಂಡದೀಕ್ಷೆ. ಅಂತರಂಗ ಶೋಧನೆಗೆ ಎತ್ತಿದ ಕೈ. ಶ್ರೀ ಮಠದ ಜೀವನ ತೆರೆದಿಟ್ಟಗ್ರಂಥ; ಉತ್ತ ಹೊಲ. ಒಳಗೊಂದು ಹೊರಗೊಂದು ಎಂಬುದು ಅದರ ಬಾಳಿನಲ್ಲಿ ಸುಳಿಯಲಿಲ್ಲ. ತಾನು ಜಾರಿದಾಗ ಮುಚ್ಚಿಟ್ಟುಕೊಳ್ಳದೆ ಲೋಕದೆದುರಿಗೆ ತನ್ನನ್ನು ತೆರೆದು ತೋರಿಸಿ ಕೊಂಡ ಅಸಾಮಾನ್ಯ ನಿದರ್ಶನ.

ಶ್ರೀ ಮಠದ ವಿವಾದಕ್ಕೆ ಅಂತಿಮ ತೆರೆ ಪರಮ ಪೂಜ್ಯ ಶ್ರೀ ಶ್ರೀ ಶಿವ ಕುಮಾರ ಸ್ವಾಮಿಗಳವರು ತೆಗೆದುಕೊಂಡ ಧೀಮಂತ ನಿರ್ಣಯ. ಶ್ರೀಮಂತ ವಾಗಿ ಬೆಳೆದು ಬಂದ ಧಾರ್ಮಿಕ ಪವಿತ್ರ ಪರಂಪರೆಯ ರಕ್ಷಣೆಗಾಗಿ ಅನಿವಾರ್ಯವಾಗಿ ತೆಗೆಧುಕೊಳ್ಳಬೇಕಾಗಿ ಬಂದ ನೇರ ನಿಷ್ಠುರ ನಿರ್ಣಯ. ಆದರೂ ಮಾನವೀಯ ಕಾರುಣ್ಯ ಗಂಗೆಯ ತುಂಬು ಔದಾರ್ಯ. 21-5-1975 ರಂದು ತಮ್ಮಿಂದಲೇ ನಿಯೋಜಿತರಾಗಿದ್ದ ಶ್ರೀ ಗೌರೀಶಂಕರ ಸ್ವಾಮಿಗಳನ್ನು ಶ್ರೀ ಮಠದ ಉತ್ತರಾಧಿ ಕಾರ ಸ್ಥಾನದಿಂದ ವಜಾ ಮಾಡಿದ ಘೋಷಣೆ. ತೆರವಾದ ಸ್ಥಾನಕ್ಕೆ ಶ್ರೀ ಸಿದ್ಧಲಿಂಗಸ್ವಾಮಿಗಳ ನೇಮಕ. ಸಹಸ್ರಾರು ಭಕ್ತಾದಿಗಳ, ಹರಗುರು ಚರ ಮೂರ್ತಿಗಳ, ಅಧಿಕಾರಿಗಳ, ಹಳೆಯ ವಿದ್ಯಾರ್ಥಿಗಳ ತುಂಬು ಸಂಭ್ರಮ ಸಡಗರಗಳ ಮಧ್ಯೆ ಕೈಗೊಂಡ ದಿಟ್ಟ ನಿಲವು.

ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ಅತ್ಯಂತ ವೈರಾಗ್ಯ ಸಂಪನ್ನರು. ಅಥಣಿಯ ಪೂಜ್ಯ ಶ್ರೀ ಶಿವಯೋಗಿಗಳಾದನಂತರ ಬಂದ ಮಹಾ ತಪಸ್ವಿಗಳು. ಕಾಯಕ-ದಾಸೋಹ, ಲಿಂಗಪೂಜಾ ನಿಷ್ಠೆ, ಅಖಂಡಬ್ರಹ್ಮಚರ್ಯೆ, ಸರ್ವಜನಾಂಗಪ್ರೇಮ, ರಾಷ್ಟ್ರಭಕ್ತಿಗಳಂಥ ಸದ್ಗುಣಗಳ ಸಾಕಾರಮೂರ್ತಿ. ತ್ರಿಕಾಲಜ್ಞಾನಿಗಳು ಯಾವುದನ್ನೂ ಕೂಲಂಕಷ ಪರೀಕ್ಷೆ ಮಾಡದೆ ನಿರ್ಣಯ ಕೊಡವವರಲ್ಲ. ಶ್ರೀ ಮಠದ ಇತ್ತೀಚೆಯ ಬೆಳ ವಣಿಗೆಯಿಂದ ತುಂಬ ನೊಂದು ಹಣ್ಣಾದರು. ಆದರೂ ನೋವುನುಂಗಿ ಒಳಿತನ್ನೇ

ಕೊಡುತ್ತ ಬಂದಿರುವ ಅಪೂರ್ವ ಉದಾಹರಣೆ. **ನಾಡಿನ ಉದ್ದಗಲಕ್ಕೆ ತಮ್ಮ ವಿರುದ್ಧ ಅಪಪ್ರಚಾರದ ಹಾಲಾಹಲವೇ ಹರಿದರೂ, ಅದೆಲ್ಲವನ್ನು ಸಹಿಸಿ ಕೊಂಡು ನಾಲ್ಕು ಸಾವಿರ ಬಡ ಮಕ್ಕಳ ವಿದ್ಯಾಭ್ಯಾಸ ಚಿಂತನೆಗಾಗಿ ದುಡಿ ಯುತ್ತಿರುವವರು.**

ಶ್ರೀ ಮಠಕ್ಕೆ ಲಕ್ಷಾಂತರ ಶಿಷ್ಯವರ್ಗ, ಕೋಟ್ಯಂತರ ಭಕ್ತಾದಿಗಳು, ಅಸಂಖ್ಯಾತ ಹಳೆಯ ವಿದ್ಯಾರ್ಥಿಗಳು, ಅಭಿಮಾನಿಗಳು, ಹಿತೈಷಿಗಳು ಲೆಕ್ಕವಿಡದಷ್ಟು ಬಳಗ ಅವರೆ ಲ್ಲರ ಒತ್ತಾಯ ಶ್ರೀ ಮಠದ ವಿವಾದಕ್ಕೆ ಅಂತಿಮ ನಿರ್ಣಯ ಕೊಡ ಬೇಕೆಂದು. ಹತ್ತಾರು ವರ್ಷಗಳಷ್ಟು ಹಳೆಯ ಸಮಸ್ಯೆ ಬಯಲಿಗೆ ಬಂದುದ್ದು ಎರಡು ಮೂರು ವರ್ಷಗಳ ಹಿಂದೆ. ಉತ್ತರಾಧಿಗಳನ್ನು ತಿದ್ದಲು ಮಾಡಿದ ಪ್ರಯತ್ನಗಳು ಒಂದಲ್ಲ, ಎರಡಲ್ಲ. ಅದೂ ಹಲವಾರು ರೂಪದಲ್ಲಿ. ಮಠಾಧಿ ಪತಿಗಳಿಂದ, ಭಕ್ತರಿಂದ, ಆತ್ಮೀಯರಿಂದ ನಿಕ ಟವರ್ತಿಗಳಿಂದ, ವೈಯಕ್ತಿಕವಾಗಿ; ಸಾಮೂಹಿಕವಾಗಿ, ಅಧಿಕಾರಿಗಳ ಸಮ್ಮುಖದಲ್ಲಿ. ಬರೆದ ಪತ್ರಗಳು ಸುಮಾರು. ಹಗಲಿರುಳು ಸದಾ ಚಿಂತನ-ಮಂಥನ ಮೇಲಿಂದ ಮೇಲೆ ಮಾರ್ಗದರ್ಶನ. ಆದಾಗ್ಗೂ ಪರಮ ಪೂಜ್ಯರ ನಿರೀಕ್ಷೆಗೆ ತಕ್ಕಂತೆ ಮೂರ್ತಿ ರೂಪಿತ ವಾಗಲಿಲ್ಲ ಎಂಬ ಕೊರಗು.

ಶ್ರೀ ಮಠಕ್ಕೆಉತ್ತರಾಧಿಕಾರಿಗಳನ್ನು ನೇಮಿಸಿಕೊಳುವ ಹಕ್ಕು ಪರಮಪೂಜ್ಯ ಶ್ರೀ ಶ್ರೀ ಗಳವರಿಗೆ ಮಾತ್ರ ಇರುವಂಥದು. ಅದನ್ನು ಪ್ರಶ್ನಿಸುವ ಅಧಿಕಾರ ಅನ್ಯರಿಗಿಲ್ಲ. ಅದು ಶ್ರೀ ಮಠದ ಪವಿತ್ರ ಪರಂಪರಾಗತ ದತ್ತವಾದ ಹಕ್ಕು ಆಂತರಿಕ ಆಡಳಿತಕ್ಕೆ ಒಳಪಟ್ಟುದ್ದು. ಮತ್ತೊಬ್ಬರು ಮಧ್ಯೆ ಪ್ರವೇಶಿಸುವಂತೆಯೇ ಇಲ್ಲ. ಅಲ್ಲದೆ ಗುರು-ಶಿಷ್ಯ ಸಂಬಂಧ ವ್ಯಾವಹಾರಿಕವಲ್ಲ; ಲೌಕಿಕ ತಕ್ಕಡಿಯಲ್ಲಿಟ್ಟು ತೂಗುವಂತಹುದಲ್ಲ; ಆಧ್ಯಾ ತ್ಮಿಕವಾದುದು. ಮಾತು ಮನಂಗಳಿಂದತ್ತತ್ತ ಮೀರಿದಜ್ಯೋತಿ' ಅದು.

ಶ್ರೀ ಮಠ ಅಂತರಂಗ ಪರೀಕ್ಷೆಯ ಮೂಲಕವೇ ಇಂದು ಎದ್ದು ನಿಂತಿರುವಂಥದು. ಲೋಕನಿರೀಕ್ಷೆ ಆದಕ್ಕೆಗೌಣ. ತನ್ನ ತಪ್ಪುಒಪ್ಪುಗಳನ್ನು ಲೋಕದೆದುರಿಗೆ ಮುಕ್ತವಾಗಿ ತೆರೆದಿಡುತ್ತ ಬಂದಿದೆ. ಬಂದು ದಿಟ್ಟ ನಿರ್ಧಾರ ತೆಗೆದುಕೊಂಡಿದೆ ಅನೇಕ ಭಕ್ತಾದಿಗಳು ಮಠಾಧಿಪತಿಗಳು, ಸಂಘ ಸಂಸ್ಥೆಗಳು, ಪ್ರಸಿದ್ಧ ಪತ್ರಿಕೆಗಳು ಪರಮ ಪೂಜ್ಯರು ತೆಗೆದು ಕೊಂಡಿರುವ ಮಹತ್ವಪೂರ್ಣ ನಿರ್ಣಯವನ್ನು ವ್ಯಾಪಕವಾಗಿ ಸ್ವಾಗತಿಸಿವೆ. ಪ್ರಶಂಸಿವೆ ಈ ಹಿನ್ನೆಯಲ್ಲಿ ನಡೆದಿರುವ ಹಿಂಸಾಕೃತ್ಯಗಳನ್ನು, ಅಹಿತಕರ ಚಟುವಟಿಕೆಗಳನ್ನು ಖಂಡಿಸಿವೆ. ಸರಕಾರ ಶಾಂತಿ ಭಂಗವಾಗದಂತೆ ಕೈಗೊಂಡಿರುವ ರಕ್ಷಣಾವ್ಯವಸ್ಥೆಯನ್ನು ಸಾರ್ವಜನಿಕರು, ನಾಗರಿಕರು ಮುಕ್ತಕಂಠ ದಿಂದ ಶ್ಲಾಘಿಸಿದ್ದಾರೆ.

ಯಾವುದು ಒಳ್ಳೆಯದು, ಯಾವುದು ಕೆಟ್ಟುದ್ದು ಎಂದು ತೀರ್ಮಾನಿಸುವುದು ಕೊನೆಗೆ ಲೋಕ ಮತ್ತು ಕಾಲ ಎಂಬುದನ್ನು ಮರೆಯ ಬಾರದು.

(ಮುಂದುವರಿದಿದೆ)



ಆರೋಗ್ಯ ರಹಸ್ಯ–೪

## ಆಹಾರ

ಮಹಾತ್ಮ ಗಾಂಧಿ

ನನ್ನ ಅಭಿಪ್ರಾಯದಲ್ಲಿ ಹಾಲು—ಮಾಂಸಗಳ ಸೇವನೆಯಲ್ಲಿ ಖಂಡಿತವಾಗಿ ಕುಂದುಗಳಿವೆ. ಮಾಂಸಕ್ಕಾಗಿ ಪ್ರಾಣಿಗಳನ್ನು ಕೊಲ್ಲುವುದು ಅಗತ್ಯ. ಎಳೆತನದಲ್ಲಿ ತಾಯಿಯ ಹಾಲನ್ನುಳಿದು ಬೇರೆ ಹಾಲು ಪಡೆಯಲು ನಮಗೇನು ಅಧಿಕಾರ ? ನೈತಿಕ ದೋಷವಂತೂ ಸರಿ, ಕೇವಲ ಆರೋಗ್ಯ ದೃಷ್ಟಿಯಿಂದಲೂ ಇತನೆ ಕೊರತೆಗಳಿವೆ. ಹಾಲು ಮಾಂಸಗಳೆರಡರಲ್ಲೂ, ಅವನ್ನು ಕೊಡುವ ಪ್ರಾಣಿಗಳ ದೋಷಗಳಿದ್ದೇ ಇರುತ್ತವೆ. ಸಾಕಿದ ಹಸುಗಳು ಪೂರ್ಣವಾಗಿ ಆರೋಗ್ಯವಾಗಿರುವುದ ತುಂಬಾ ಅಪರೂಪ. ಮನುಷ್ಯನಂತೆಯೇ ಹಸುಗಳೂ ಲೆಕ್ಕವಿಲ್ಲದಷ್ಟು ಕಾಯಿಲೆಗಳಿಂದ ನರಳುತ್ತವೆ. ಹಸುಗಳು ವೈದ್ಯಕೀಯ ಪರೀಕ್ಷೆನಡೆಯುವಾಗಲೂ, ಇವುಗಳಲ್ಲಿ ಅನೇಕ ಕಾಯಿಲೆ ಗಮನಕ್ಕೆ ಬರುವುದೇ ಇಲ್ಲ. ಅಲ್ಲದೆ ಭಾರತ ದೇಶದ ಎಲ್ಲಾ ದನಕರುಗಳ ವೈದ್ಯ ಪರೀಕ್ಷೆ ಸದ್ಯಕ್ಕಂತೂ ಅಸಾಧ್ಯ ಸಾಹಸ. ಸೇವಾಗ್ರಾಮದ ಆಶ್ರಮದಲ್ಲಿ ನಾನು ಗೋಶಾಲೆ ನಡೆಸುತ್ತಿದೇನೆ ವೈದ್ಯರ ಸಹಾಯ ಸಿಗುವುದು ನಮಗೆ ಸುಲಭ. ಆದರೆ ಆರೋಗ್ಯವಾಗಿವೆ ಯೆಂದು ಖಂಡಿತವಾಗಿ ಹೇಳಲಾರೆ ಎಲ್ಲರೂ ಆರೋಗ್ಯವಾಗಿದೆ ಎನ್ನುತ್ತಿದ್ದ ಒಂದು ಹಸು ಕ್ಷಯ, ರೋಗ ಪೀಡಿತವಾಗಿದ್ದುದು ತಿಳಿದು ಬಂದಿತು. ಈ ರೋಗ ನಿದಾನಕ್ಕೆ ಮೊದಲು ಆ ಹಸುವಿನ ಹಾಲನ್ನು ಆಶ್ರಮದಲ್ಲಿ ನಿತ್ಯವೂ ಉಪಯೋಗಿಸುತ್ತಿದ್ದರು. ಅಕ್ಕಪಕ್ಕದ ಹಳ್ಳಿಗಳ ರೈತರಿಂದಲೂ ಆಶ್ರಮ ಹಾಲು ತಗೆದುಕೊಳುತ್ತದೆ. ಅವರ ಹಸುಗಳು ವೈದ್ಯಪರೀಕ್ಷೆ ಗೊಳಗಾಗಿಲ್ಲ. ಈ ಹಾಲು ಉಪಯೋಗಿಸಲು ಯೋಗ್ಯವೆ ಅಲ್ಲವೆ ಎಂದು ನಿರ್ಧರಿಸುವುದು. ಕಷ್ಟ. ಹಾಲನ್ನು ಕಾಯಿಸಿದರೆ ಇಷ್ಟು ಮಟ್ಟಿಗೆ ಕ್ಷೇಮವೂ ಅಷ್ಟರಿಂದಲೇ ನಾವು ತೃಪ್ತರಾಗಬೇಕು. ತನ್ನ ಹಸುಗಳ ಪೂರ್ಣ ವೈದ್ಯಪರೀಕ್ಷೆಯ ಬಗ್ಗೆ ಆಶ್ರಮವೇ ಹೆಮ್ಮೆ ಪಡುವಂತಿಲ್ಲ. ತನ್ನ ಹಾಲು ಮೊಸರು ತುಪ್ಪಗಳೂ ಶುದ್ಧವೆಂದು ಖಂಡಿತವಾಗಿ ಹೇಳುವಂತಿಲ್ಲ. ಹೀಗಿರುವಾಗ ಉಳಿದ ಕಡೆ ಪರಿಸ್ಥಿತಿ ಇದಕ್ಕಿಂತ ಉತ್ತಮವಾಗಿರಲಾರದು. ಹಸುಗಳ ಬಗ್ಗೆ ಹೇಳಿರುವುದೆಲ್ಲ, ಮಾಂಸಕ್ಕಾಗಿ ಕೊಲ್ಲುವ ಇತರ ಪ್ರಾಣಿಗಳಿಗೆ ಇನ್ನೂ ಹೆಚ್ಚಿಗೆ ಅನ್ವಯಿಸುತ್ತದೆ. ಸಾಮಾನ್ಯವಾಗಿ, ಮನುಷ್ಯನಿಗೆ ಈ ಅಪಾಯಗಳು ಬಾರದಿದ್ದರೆ ಅವನ ಅದೃಷ್ಟವೇ ಅದಕ್ಕೆ ಕಾರಣ. ತನ್ನ ಆರೋಗ್ಯದ ಬಗ್ಗೆ ಹೆಚ್ಚು ಚಿಂತೆ ಮಾಡವಂತೆ ತೋರುವುದೇ ಇಲ್ಲ ಮನುಷ್ಯ. ಡಾಕ್ಟರರ, ವೈದ್ಯರ, ಹಕೀಮರದೊಂದು ವೈದ್ಯ

ಕೀಯ ಕೋಟೆಕಟ್ಟಿ ಸುರಕ್ಷಿತವಾಗಿದೇನೆ ಎಂದು ತಿಳಿದಿದಾನೆ ಅವನಿಗಿರುವ ಮುಖ್ಯ ಚಿಂತೆ—ಆಸಕ್ತಿ, ಐಶ್ವರ್ಯವನ್ನು ಸಮಾಜದಲ್ಲಿ ಸ್ಥಾನವನ್ನೂ ಗಳಿಸುವುದೊಂದೇ. ಈ ಚಿಂತೆ ಉಳಿದವೆಲ್ಲವನ್ನೂ ಮರೆಯಿಸುತ್ತದೆ. ಆದ್ದರಿಂದ, ಯಾವನಾದರೂ ಒಬ್ಬ ನಿಸ್ವಾರ್ಥಿ ವಿಜ್ಞಾನಿ, ಸಹನೆಯಿಂದ ಸಂಶೋಧನೆಮಾಡಿ, ಹಾಲು ಮಾಂಸಗಳಿಗೆ ಬದಲು ಒಂದು ಸಸ್ಯಪದಾರ್ಥವನ್ನು ಕಂಡು ಹಿಡಿಯುವ ತನಕ ಮನುಷ್ಯ ಹಾಲು ಮಾಂಸಗಳನ್ನು ಸೇವಿಸುತ್ತಲೇ ಇರುತ್ತಾನೆ.

ಮಿಶ್ರಾಹಾರವನ್ನು ನೋಡೋಣ. ಮನುಷ್ಯನ ದೇಹ ದಿನವೂ ಸವೆಯುತ್ತದೆ ಆದ್ದರಿಂದ ಒಳಗಿನ ಅಂಗಸತ್ವಗಳನ್ನು ಸ್ನಾಯುಗಳನ್ನು ದಿನವೂ ವೃದ್ಧಿಗೊಳಿಸುವಂಥ ಆಹಾರ ಮನುಷ್ಯನಿಗೆ ಬೇಕು. ಇದಲ್ಲದೆ ಮೈಗೆ ಶಕ್ತಿಯನ್ನೂ ಜಿಡ್ಡನ್ನೂ ಕೆಲವು ಲವಣಗಳನ್ನೂ ಒಳಗಿನ ಮಲಪದಾರ್ಥಗಳನ್ನು ಹೊರದೂಡುವ ನಾರು ತವುಡನ್ನೂ ನೀಡುವ ವಸ್ತುಗಳು ಬೇಕು ಅಂಗಸತ್ವವನ್ನು ಬೆಳೆಸುವ ವಸ್ತುಗಳಿಗೆ ಸಸಾರಜನಕಗಳೆಂದು ಹೆಸರು. ಹಾಲು, ಮಾಂಸ, ಮೊಟ್ಟೆ, ದ್ವಿದಳಧಾನ್ಯ, ಕಾಯಿ ಬೀಜಗಳಿಂದ ಸಸಾರಜನಕ ಲಭಿಸುತ್ತದೆ. ಹಾಲು' ಮಾಂಸಗಳಿಂದ ಸಿಗುವ ಸಸಾರಜನಕ ಅಥವ ಪ್ರಾಣಿಸಂಬಧವಾದ ಸಸಾರಜನಕವನ್ನು ಹೆಚ್ಚು ಸುಲಭವಾಗಿ ಅರಗಿಸಿ ರಕ್ತಗತ ಮಾಡಿಕೊಳ್ಳಬಹುದು. ಆದ್ದರಿಂದ ಇವುಗಳ ಬೆಲೆ ಸಸಾರಜನಕ ಸಸ್ಯಪದಾರ್ಥಗಳಿಗಿಂತ ಹೆಚ್ಚು. ಮಾಂಸಕ್ಕಿಂತ ಹಾಲುಶ್ರೇಷ್ಠ. ಮಾಂಸ ಅರಗದಿರುವಾಗ ಸಹ ಹಾಲು ಸುಲಭವಾಗಿ ಅರಗುತ್ತದೆ ಎಂದು ವೈದ್ಯರು ಹೇಳುತ್ತಾರೆ. ಸಸ್ಯಹಾರಿಗಳಿಗೆ ಹಾಲು ಒಂದೇ ಪ್ರಾಣಿಸಂಬಂಧ ಸಸಾರಜನಕ ವಸ್ತುವಾದ್ದರಿಂದ, ಅವರಿಗೆ ಅದು ಆಹಾರದ ಮುಖ್ಯಾಂಶ. ಹೊಸ ಮೊಟ್ಟೆಗಳ ಸಸಾರಜನಕ ಅತ್ಯಂತ ಸುಲಭವಾಗಿ ಜೀರ್ಣವಾಗುವುದೆಂದು ಪರಿಗಣಿಸಲ್ಪಟ್ಟಿದೆ.

ಆದರೆ ಎಲ್ಲರೂ ಹಾಲು ತೆಗೆದುಕೊಳ್ಳಲು ಆಗುವುದಿಲ್ಲ. ಎಲ್ಲಾ ಸ್ಥಳಗಳಲ್ಲೂ ಹಾಲು ಸಿಗುವುದಿಲ್ಲ. ಇಲ್ಲಿ ಹಾಲಿನ ವಿಷಯದಲ್ಲಿ ಒಂದ ಮುಖ್ಯವಾದ ಮಾತನ್ನು ಹೇಳಬಯಸುತ್ತೇನೆ. ಸಾಧಾರಣ ನಂಬಿಕೆಗೆ ವಿರೋದವಾದರೂ ಕೆನೆ ತೆಗೆದ ಹಾಲು ಉತ್ತಮವಾದ ಆಹಾರ. ಹಾಲಿಗಿಂತಲೂ ಅದೇ ಹೆಚ್ಚು ಉಪಯುಕ್ತವಾದ ಸಂದರ್ಭಗಳೂ ಉಂಟು. ಅಂಗಸತ್ವಗಳನ್ನು ಬೆಳೆಸುವುದು, ಅವುಗಳನ್ನು ಸರಿ ಮಾಡುವುದು, ಹಾಲಿನ ಮುಖ್ಯ ಕೆಲಸ. ಕೆನೆ ತೆಗೆಯುವುದರಿಂದ ಕೊಬ್ಬು ಹೋಗುತ್ತದೆಯೇ ಹೊರತು, ಸಸಾರಜನಕಗಳು ಹೋಗುವುದಿಲ್ಲ. ಅಲ್ಲದೆ, ಈಗಿರುವ ಕೆನೆ ತೆಗೆಯುವ ಸಾಧನಗಳು ಕೊಬ್ಬನ್ನು ಪೂರ್ಣವಾಗಿ ತೆಗೆಯಲಾರವು. ಅಂಥ ಸಾಧನವನ್ನು ರಚಿಸುವ ಸಂಭವವೂ ಇಲ್ಲ.

(ಮುಂದುವರಿಯುತ್ತದೆ)

# ಸನಾತನ ಧರ್ಮವೆಂದರೇನು ?

ಶ್ರೀ ಬಿ. ಭಗವಾನ್ ಸಿಂಗ್.

ಸನಾತನ ಧರ್ಮ ಎಂಬುದು ಯಾವ ಧರ್ಮ? ಇದನ್ನು ಯಾರು ಸ್ಥಾಪಿಸಿದ್ದಾರೆ? ಇದನ್ನು ಪ್ರತಿಪಾದಿಸುವ ಧರ್ಮ ಗ್ರಂಥವಾವುದು ? ಇದನ್ನು ಅನುಸರಿಸುವವರ ಆಚಾರ ವಿಚಾರಗಳೇನು ? ಇತ್ಯಾದಿ ಪ್ರಶ್ನೆಗಳನ್ನು-ಜನ ಕೇಳುತ್ತಿದ್ದಾರೆ, ಹಿಂದೂ, ಜೈನ, ಬೌದ್ಧ, ಕ್ರೈಸ್ತ, ಇಸ್ಲಾಂ ಧರ್ಮಗಳ ಹೆಸರುಗಳು ರೂಢಿಯಲ್ಲಿರುವಷ್ಟು ಸನಾತನ ಧರ್ಮದ ಹೆಸರು ರೂಢಿಯಿಲ್ಲಿಲ್ಲ, ಹಾಗೆಂದು ಇದು ರೂಢಿಯಲ್ಲಿಲ್ಲವೇ ಇಲ್ಲ ಎಂದು ಹೇಳಲಾಗುವುದಿಲ್ಲ, ವೇದಗಳೂ, ಸ್ಮೃತಿಗಳೂ, ಪುರಾಣಗಳೂ ಪ್ರತಿಪಾದಿಸುವ ಧರ್ಮಕ್ಕೆ ಸನಾತನ ಧರ್ಮವೆಂಬ ಹೆಸರು ರೂಢಿ-ಯಲ್ಲಿದೆ. ಹಿಂದೂ ಧರ್ಮದಲ್ಲಿನ "ಹಿಂದೂ" ಎಂಬ ಶಬ್ಧವು ಪ್ರಾಚೀನ ಕಾಲದ್ದಲ್ಲ, ಅಲ್ಲದೆ ಹಿಂದೂ ಧರ್ಮವಲ್ಲಿ ಶ್ರುತಿ ಪ್ರಮಾಣವನ್ನು ಅಂಗೀಕರಿಸದ ಧರ್ಮಗಳೂ ಸೇರಿಕೊಂಡಿವೆ. ಅವುಗಳನ್ನು ಬಿಟ್ಟು ಕೇವಲ ಶ್ರುತಿ ಸ್ಮೃತಿ ಪುರಾಣಗಳ ಪ್ರಮಾಣವೇ ಮುಖ್ಯ ಎಂದು ವಾದಿಸುವವರು ತಮ್ಮ ಧರ್ಮವೆಂದು ಹೇಳಿಕೊಂಡಿರುವುದೂ ಅಂತಹವರನ್ನು ಸನಾತನಿಗಳೆಂದು ಹೇಳುವ ರೂಢಿಯು ಇದೆ. ಅಂತಹವರು ಈ ಧರ್ಮವನ್ನು ಸನಾತನ ಧರ್ಮವೆಂದು ಕರೆಯಲು ಕಾರಣ ಮೇಲ್ಕಂಡ ಸಾಹಿತ್ಯದಲ್ಲಿ ಎಲ್ಲೋ ಒಂದೊಂದು ಕಡೆ ಈ ಹೆಸರು ಇರುವುದು.

ನವೀನ ಯುಗದ ಮಹಾಪುರುಷರಾದ ವಿವೇಕಾನಂದ, ಗಾಂಧೀಜಿ ಮುತಾದವರು ಸಹ ತಮ್ಮ ಧರ್ಮ ಸನಾತನ ಧರ್ಮವೆಂದೇ ಹೇಳಿದ್ದಾರೆ. ಆದರೆ ಇವರು ಸನಾತನಿಗಳು ಎಂದೆನಿಸಿಕೊಂಡವರಿಗಿಂತಲು ವಿಶಾಲ ಮನೋಭಾವವುಳ್ಳವರು.

ಸನಾತನ ಧರ್ಮ ಸಂರಕ್ಷಣ ಸಂಸ್ಥೆಯು ಪ್ರಾರಂಭವಾದಾಗ ವೇದ ಶಾಸ್ತ್ರ ಪುರಾಣಗಳಲ್ಲಿ ಹೇಳಿರುವ ಧರ್ಮವನ್ನು ಪ್ರಚಾರ ಮಾಡುವ ಉದ್ಧೇಶದಿಂದಲೇ ಹೊರಟಿದ್ದು, ಆದರೆ ಸನಾತನಿಗಳು ಎಂದು ಹೇಳಲ್ಪಡುವವರ ಮನೋಭಾವದಿಂದಲ್ಲ, ವಿವೇಕಾನಂದರು ಗಾಂಧೀಜಿ ಮುಂತಾದವರ ಮನೋಭಾವದಿಂದಲೇ ಸಂಸ್ಥೆ ಸ್ಥಾಪಿತವಾದದು. ಅದುದರಿಂದ ಕ್ರೈಸ್ತ, ಇಸ್ಲಾಂ ಮತ್ತು ಇತರ ಧರ್ಮಗಳ ಮತ್ತು ಮಹಾತ್ಮರ ವಾಣಿಯನ್ನು ವೇದಶಾಸ್ತ್ರ ಪುರಾಣಗಳ ವಾಣಿಯಷ್ಟೇ ಗೌರವದಿಂದ ನೋಡುವುದು ಅದನ್ನು ಸಹ ಪತ್ರಿಕೆಯ ಮೂಲಕ ಪ್ರಚಾರ ಮಾಡುವುದು ಮೊದಲಿನಿಂದ ಈ ಸಂಸ್ಥೆಯ ಧ್ಯೇಯವಾಗಿರುತ್ತದೆ.

ಸನಾತನವೆಂದರೆ ಎಲ್ಲ ಕಾಲಗಳಿಗೂ ಅನ್ವಯಿಸುವುದು ಎಂಬರ್ಥ. ಅಂದ
ದೇಶ ಕಾಲ ಪರಿಸ್ಥಿತಿಗಳನ್ನು ಅನುಸರಿಸಿ ಬದಲಾಯಿಸುವ ಬಾಹ್ಯಾಚಾರಗಳಲ್ಲ
ಮತ್ತು ಧರ್ಮಕ್ಕೆ ಮೂಲಭೂತವಾದ ತತ್ವಗಳು ಎಂಬ ಅರ್ಥದಲ್ಲಿ ಗ್ರಹಿಸಬೇಕು, -
ಅರ್ಥದಲ್ಲೇ ಸಂಸ್ಕೃತ ಭಾಷೆಯ ಸಾಹಿತ್ಯದಲ್ಲಿ ಈ ಮಾತಿನ ಪ್ರಯೋಗವಾಗಿರುವುದ

ಸತ್ಯಂಬ್ರೂಯಾತ್ ಪ್ರಿಯಂಬ್ರೂಯಾತ್
ನಬ್ರೂಯಾತ್ ಸತ್ಯಮಪ್ರಿಯಂ
ಪ್ರಿಯಂಚ ನಾನೃತಂ ಬ್ರೂಯಾತ್
ಏಷಧರ್ಮಃ ಸನಾತನಃ

ಎಂಬ ಮನುಸ್ಮೃತಿಯ ವಾಕ್ಯವು ಪ್ರಸಿದ್ಧವಾದುದು. ಸತ್ಯವನ್ನು ಹೇ
ನುಡಿಯಬೇಕೆಂಬ ಇಲ್ಲಿನ ಉಪದೇಶವು ಸಾರ್ವಕಾಲಿಕವಾದುದು. ಆದುದರಿಂದ ಈ
ಧರ್ಮವು ಸನಾತನ, ಎಂದು ಹೇಳಲ್ಪಟಿದೆ ಇದೇ ರೂಢಿಯೇ ಬೇರೆ ಪ್ರಯೋಗಗಳಲ್ಲೂ
ಕಂಡುಬರುತ್ತದೆ. ಸಾರ್ವಕಾಲಿಕವಾದುದು ಸಾರ್ವದೇಶಿಕವೂ ಆಗುವದೆಂದ
ಭಾವಿಸಬೇಕು. ಏಕೆಂದರೆ ಕಾಲದ ಬದಲಾವಣೆಯಿಂದ ಪರಿಸ್ಥಿತಿಗಳ ಬದಲಾವಣ
ಆದಂತೆಯೇ ದೇಶದ ಬದಲಾವಣೆಯಿಂದಲೂ ಪರಿಸ್ಥಿತಿಗಳ ಬದಲಾವಣೆ ಆಗುತ್ತ
ಧರ್ಮ ಶಬ್ಧದ ಅರ್ಥವು ಅದನ್ನು ಮಾನವರೆಲ್ಲರಿಗೂ ಅನ್ವಹಿಸುವಂತಿದೆಯೆ
ಹೊರತು ಬಂದು ಜನಾಂಗ ಅಥವಾ ದೇಶ ಅಥವ ಭಾಷಗೆ ಅನ್ವಯಿಸುವುದಲ್ಲ
ಧರಿಸುವುದರಿಂದ ಧರ್ಮ, ಧರಿಸುವುದು ಅಂದರೆ ಭಿನ್ನ ಭಿನ್ನವಾಗಿರುವುದನ್ನು ಜೋಡಿಸಿ
(ಭಿನ್ನತೆಯೊಳಗೆ ಏಕತೆಯನ್ನುಂಟುಮಾಡಿ) ಹಿಡಿದಿರುವುದು ಮಾನವರನ್ನು ಧರಿಸುವುದ
ಧರ್ಮ, ಅಂದರೆ ಸ್ವಾರ್ಥ ಪ್ರವೃತ್ತಿಯಿಂದ ಚದುರಿದ ಮಾನವರನ್ನು ಒಂದು ಸೂತ್ರ
ದಲ್ಲಿ ಬಂಧಿಸಿ ಎಲ್ಲರನ್ನೂ ಹಿಡಿದಿರುವುದು ಎಂದು ಅರ್ಥ, ಮನುಸ್ಮೃತಿಯು ಈ
ಅಭಿಪ್ರಾಯವನ್ನೇ ವ್ಯಕ್ತಪಡಿಸುತ್ತದೆ.

ಈ ಧರ್ಮವು ಮಾನವರೆಲ್ಲರೂ ಅನುಸರಿಸಬೇಕಾದ ಕೆಲವು ನೀತಿ ನಿಯಮ
ಗಳ ರೂಪದಲ್ಲಿರುತ್ತದೆ ಈ ನೀತಿ ನಿಯಮಗಳನ್ನು ಬೇರೆ ಬೇರೆ ಕಾಲಗಳ, ದೇಶಗಳ
ಮಹಾತ್ಮರು ಭೋಧಿಸಿರುವುದರಿಂದ ಮೇಲ್ನೋಟಕ್ಕೆ ಇವು ಬೇರೆ ಬೇರೆ ರೂಪಗಳ
ಲ್ಲಿದ್ದರೂ ಇವುಗಳ ಮೂಲತತ್ವಗಳೂ ಒಂದೇ. ಬೇರೆ ಬೇರೆ ಹಣ್ಣುಗಳು ಬೇರೆ ಬೇರೆ
ಆಕಾರ. ಸಿಪ್ಪೆ ಉಳ್ಳವುಗಳಾಗಿದ್ದರೂ ಅವುಗಳಲ್ಲಿನ ರಸದ ಸಿಹಿಯ ಅಂಶವು ಒಂದೆ
ಆಗಿರುವಂತೆ ಧರ್ಮಗಳೆಲ್ಲವುಗಳ ಮೂಲ ತತ್ವಗಳೂ ಒಂದೇ, ಮುಖ್ಯವಾದುದು
ರಸ, ಸಿಪ್ಪೆ ಅದನ್ನು ಹಿಡಿಯುತ್ತದೆ ಅಷ್ಟೆ, ರಸವನ್ನು ಹೀರಿ ಸಿಪ್ಪೆಯನ್ನು ಬಿಸಾಕಬೇಕು
ಈ ದೃಷ್ಟಿಯಿಂದ ಧರ್ಮಾಚರಣೆಯನ್ನು ಮಾಡುವುದೇ ಸನಾತನ ಧರ್ಮ.

ಯಮಾನ್ ಸೇವೇತ ಸತತಂ
ನ ನಿತ್ಯಂ ನಿಯಮಾನ್ ಬುಧಃ
ಯಮಾನ್ ಪತತ್ಯ ಕುರ್ವಾಣೋ
ನಿಯಮಾನ್ ಕೇವಲಾನ್ ಭಜನ್

ಎಂಬ ಮನುಸ್ಮೃತಿಯ ವಾಕ್ಯವು ಈ ತತ್ವವನ್ನೇ ಬೋಧಿಸುತ್ತಿದೆ. ಅಹಿಂಸೆ. ಸತ್ಯ ದಯೆ. ಕ್ಷಮೆ ಮುಂತಾದವು ಯಮಗಳು. ಸ್ನಾನ, ಉಪವಾಸ, ಮೌನ, ಬ್ರಹ್ಮಚರ್ಯ ಮುಂತಾದವು ನಿಯಮಗಳು ಯಮಗಳನ್ನು ಬಿಟ್ಟು ಕೇವಲ ನಿಯಮಗಳನ್ನು ಆಚರಿಸುವವನು ಪತಿತನಾಗುತ್ತಾನೆ ಎಂಬುದು ಮೇಲಿನ ಶ್ಲೋಕದ ತಾತ್ಪರ್ಯ.

ಧರ್ಮ ಗ್ರಂಥಗಳ ವಾಕ್ಯಗಳನ್ನು ಅಕ್ಷರಶಃ ಅರ್ಥ ಮಾಡುವುದು ಸರಿಯಲ್ಲ. ಅವುಗಳ ಉದ್ದೇಶವನ್ನು ವಿವೇಕದಿಂದ ಗ್ರಹಿಸಬೇಕು. ಧರ್ಮ ಸೂಕ್ಷ್ಮವನ್ನರಿಯಬೇಕು ಎಂಬುದು ಸನಾತನ ಧರ್ಮದ ಮತ್ತೊಂದು ಮುಖ್ಯ ಲಕ್ಷಣ. ಒಂದು ವಾಕ್ಯವು ಅಕ್ಷರಶಃ ಅರ್ಥ ಮಾಡಿದರೆ ಅಸತ್ಯವೂ ಉದ್ದೇಶವನ್ನನುಸರಿಸಿ ಅರ್ಥ ಮಾಡಿದರೆ ಮಹಾ ಸತ್ಯವು ಆಗಿರುವ ಸಂಭವವಿದೆ, ಉದಾಹರಣೆಗೆ.

"ಅರ್ಥಮನರ್ಥಂ ಭಾವಯನಿತ್ಯಂ, ನಾಸ್ತಿ ತತಸ್ಸುಖ ಲೇಶಸ್ಸತ್ಯಂ" ಎಂಬ ಭಜಗೋವಿಂದ ಶ್ಲೋಕವನ್ನು ತೆಗೆದುಕೊಳ್ಳೋಣ. ಧನವನ್ನು ಯಾವಾಗಲೂ ಅನರ್ಥವೆಂದು ಭಾವಿಸು. ಧನದಿಂದ ಲೇಶಮಾತ್ರವೂ ಸುಖವಿಲ್ಲ. ಈ ಮಾತನ್ನು ಅಕ್ಷರಶಃ ತೆಗೆದುಕೊಂಡರೆ ಇದಕ್ಕಿಂತ ಅಸತ್ಯವಾದ ವಾಕ್ಯವಿಲ್ಲ. "ಧನಮೂಲಮಿದಂ ಜಗತ್." ಮಾನವರು ಬದುಕಲು ಧನಬೇಕು. ಧನವಿಲ್ಲದೆ ಸುಖವಿಲ್ಲಿದೆ? ಇದೇ ವಾಕ್ಯವನ್ನೇ ಉದ್ದಿಷ್ಟವಾದ ಅರ್ಥದಲ್ಲಿ ಎಲ್ಲರೂ ಗ್ರಹಿಸುತ್ತಿದ್ದೇವೆ, ಅದರ ಮಹಾಸತ್ಯವನ್ನು ಅರಿಯುತ್ತಿದ್ದೇವೆ.

ಸನಾತನ ಧರ್ಮವು ಯಾವ ಒಬ್ಬ ಪ್ರವಾದಿಯನ್ನು ಮಾತ್ರ ಅನುಸರಿಸಬೇಕೆಂಬ ಧರ್ಮವಲ್ಲ. ಎಲ್ಲ ಕಾಲಗಳ ದೇಶಗಳ ಋಷಿಗಳೂ, ಮಹಾತ್ಮರೂ ಹೇಳಿರುವ ಮಾತುಗಳನ್ನು ಉದ್ದಿಷ್ಟವಾದ ಅಭಿಪ್ರಾಯದಂತೆ ಅರ್ಥೈಸಿ ವಿವೇಕದಿಂದ ಅವುಗಳ ಸಾರವನ್ನು ಗ್ರಹಿಸಿ ದೇಶಕಾಲ ಪರಿಸ್ಥಿತಿಗಳನ್ನನುಸರಿಸಿ ಆ ಸಾರಭೂತವಾದ ಧರ್ಮವನ್ನು ಆಚರಿಸುವುದು ಇದರ ಉದ್ದೇಶ. ಮಾನವರಲ್ಲಿ ಸತ್ವರಜಸ್ತಮೋ ಗುಣಗಳ ಭೇದದಿಂದ ವ್ಯಾವಹಾರಿಕವಾಗಿ ಹೆಚ್ಚು ಕಡಿಮೆ ಎಂಬ ಭಾವನೆಯುಂಟಾಗುತ್ತದೆಯೇ ಹೊರತು ಇವು ಬಿಟ್ಟು ಜಾತಿ, ಕುಲ, ವೃತ್ತಿ, ಭಾಷೆ ಇತ್ಯಾದಿಗಳಿಂದ ಒಬ್ಬರು ಹೆಚ್ಚು, ಒಬ್ಬರು ಕಡಿಮೆ ಎಂಬ ಭಾವನೆ ಮಾಡಬಾರದು. ಜ್ಞಾನ ದೃಷ್ಟಿಗೆ ಆತ್ಮದಲ್ಲಿ ಗುಣಗಳ ಭೇದವು ಸಹ ಇಲ್ಲ. ಎಲ್ಲರೂ ದೇವರ ಸ್ವರೂಪ, ಇತ್ಯಾದಿ ತತ್ವಗಳನ್ನು

ಸನಾತನ ಧರ್ಮವು ಒಳಗೊಂಡಿದೆ. ಇಲ್ಲಿ ಮೂಢನಂಬಿಕೆಗಳಗೆ ಸ್ಥಾನವಿಲ್ಲ. ವಿಚಾರಕ್ಕೆ ಪೂರ್ಣವಾದ ಅವಕಾಶವಿದೆ. ಅಭಿಪ್ರಾಯ ಭೇದಗಳಿಗೆ ಗೌರವವಿದೆ, ಧನಿಕರು, ಬಡವರು ಎಂಬ ವರ್ಗಭೇದವಿಲ್ಲ. ಎರಡು ವರ್ಗಗಳಲ್ಲೂ ಧರ್ಮಬುದ್ಧಿವುಳ್ಳವರು ಮಾತ್ರ ಮಾನ್ಯರು, ಸ್ವಾರ್ಥವಿರಬಾರದು. ಪರೋಪಕಾರ ಮಾಡಬೇಕು, ಸ್ಪರ್ಧೆಗಿಂತಲೂ ಸಹಕಾರ ಬೆಳೆಯಬೇಕು, ತನ್ನಂತೆ ಇತರರು ಎಂಬ ದೃಷ್ಟಿ ಬೆಳೆಯಬೇಕು. ತ್ಯಾಗವಿರಬೇಕು, ಇವೇ ಮುಂತಾದವು ಸನಾತನ ಧರ್ಮದ ಲಕ್ಷ್ಯಗಳು.

ಇಂತಹ ಸನಾತನ ಧರ್ಮವನ್ನು ಸರಿಯಾದ ರೀತಿಯಲ್ಲಿ ಅರ್ಥ ಮಾಡಿಕೊಳ್ಳುವ ಮತ್ತು ಸಂರಕ್ಷಿಸುವ ಉದ್ದೇಶದಿಂದಲೇ ನಮ್ಮ ಸನಾತನಧರ್ಮ ಸಂರಕ್ಷಣ ಸಂಸ್ಥೆ ದುಡಿಯುತ್ತಿದೆ. ರಾಜಕೀಯವಾದ ಸ್ಪರ್ಧೆಗೆ ನಮ್ಮ ಸಂಸ್ಥೆಯು ಬಹಳ ದೂರ. ಜನರು ಹೃತ್ಪೂರ್ವಕವಾಗಿ ಕೊಡುವ ದಾನಗಳಿಂದ ಜ್ಞಾನ ಪ್ರಸಾರ ಮತ್ತು ಪರೋಪಕಾರದ ಕೆಲಸಗಳನ್ನು ಮಾಡುತ್ತದೆ. ಇದರಲ್ಲಿ ಎಲ್ಲ ಸತ್ಪುರುಷರಿಗೂ ಸ್ಥಾನವಿದೆ. ಇತ್ತೀಚೆಗೆ ಟ್ರಸ್ಟ್ ಪತ್ರದಲ್ಲಿನ ಧ್ಯೇಯಗಳಲ್ಲಿ ಮಾಡಲ್ಪಟ್ಟಿರುವ ಬದಲಾವಣೆಗಳನ್ನು ಈಗಾಗಲೇ ಈ ಪತ್ರಿಕೆಯಲ್ಲಿ ಪ್ರಕಟಿಸಿರುತ್ತೇವೆ.

ಒಟ್ಟಿನಲ್ಲಿ ಸಂಸ್ಥೆಯ ಚಿಹ್ನೆಯಲ್ಲಿರುವ ದಮ, ದಾನ, ಮತ್ತು ದಯೆ ಎಂಬುವೇ ಸನಾತನ ಧರ್ಮದ ಮೂಲ ಸ್ವರೂಪ.

ಕೃಪೆ:- ಧರ್ಮಪ್ರಭ

---

# ಇದು ಅವರ ಸ್ವಂತ ವಿಮಾನ ಕಂಪೆನಿ.

**ಬಿ. ಸುಬ್ರಾಯ ಅಡಿಗ,** ನಿವೃತ್ತ ಉಪಾಧ್ಯಾಯರು, ಸಂಡೂರು, ಬಳ್ಳಾರಿ ಜಿಲ್ಲೆ - 583119

ಇಂದು ಪೆಟ್ರೋಲ್ ಹಾಗೂ ವಿಮಾನದಲ್ಲಿ ಬಳಸಲಾಗುವ ಇಂಧನದ ಬೆಲೆ ಗಗನಕ್ಕೇರಿರುವಾಗ, ವಿಮಾನ ಕಂಪನಿಯೊಂದನ್ನು ಖಾಸಗಿಯಾಗಿ ನಡೆಸುವುದೇನೂ ಸಣ್ಣ ಸಂಗತಿಯಲ್ಲ. ಇದರಿಂದಾಗಿಯೇ ಬಹುಶಃ ವಿಶ್ವದ ಹಲವಾರು ವಿಮಾನ ಕಂಪನಿಗಳು ನಷ್ಟದಲ್ಲಿ ನಡೆಯುತ್ತಿವೆ.

ಆದರೆ ಈ ಭಯಂಕರ ಬೆಲೆಯೇರಿಕೆಯ ಕಾಲದಲ್ಲೂ ಕೆಲವು ವಿಮಾನಗಳು ಲಾಭಗಳಿಸುತ್ತಲಿವೆ. 'ಪೀಪಲ್ಸ್ ಎಕ್ಸ್‌ಪ್ರೆಸ್' ಅವುಗಳಲ್ಲೊಂದು ಬೆಲೆಯೇರಿಕೆಯ ಹೊಡೆತಗಳನ್ನು ಬಲುವಿಚಿತ್ರರೀತಿಯಿಂದ ಎದುರಿಸುತ್ತ ಅದು ಜನಸೇವೆ ಮಾಡುತ್ತಿದೆ.

ಸುಮಾರು ಏಳು ವರ್ಷಗಳ ಹಿಂದೆ ಪೀಪಲ್ಸ್ ಎಕ್ಸ್‌ಪ್ರೆಸ್ ಸಂಯುಕ್ತ ರಾಜ್ಯ ಅಮೇರಿಕೆಯಲ್ಲಿ ಸ್ಥಾಪಿತವಾಯಿತು. ಆರಂಭವಾದ ಅಲ್ಪಾವಧಿಯಲ್ಲೇ ಅದು ಲಾಭ ಪಡೆಯ ತೊಡಗಿತು. ಆದರೆ ಲಾಭಗಳಿಸಲು ಅದು ಅನುಸರಿಸಿದ ಕ್ರಮಗಳು ಮಾತ್ರ ಇಂದಿನ ಯುಗದಲ್ಲಿ ವಿಚಿತ್ರವೆಂದೇ ಹೇಳಬಹುದು. ವಿಚಿತ್ರವಾದರೂ ಅವು ಪ್ರಶಂಸನೀಯವೇ.

ಆಧುನಿಕ ವಿಮಾನದಲ್ಲಿ ತೋರಿಬರುವ ಆಡಂಬರ ಹಾಗೂ ವೈಭವಗಳ ಬದಲು ಸರಳತೆ ಹಾಗೂ ಮಿತವ್ಯಯವನ್ನೇ ಪೀಪಲ್ಸ್ ಎಕ್ಸ್‌ಪ್ರೆಸ್ ಅನುಸರಿಸಿತು. ಆಡಂಬರಗಳಿಗಾಗಿ ಮಾಡಲಾದ ವೆಚ್ಚವನ್ನು ನಿಲ್ಲಿಸಿಯೇ ಪ್ರವಾಸದರವನ್ನು ತಗ್ಗಿಸಲು ಸಾಧ್ಯ ಎಂದು ಇದರ ಮುಖಂಡರು ನಿರ್ಧರಿಸಿದರು.

ಈ ಕಂಪೆನಿ ತನ್ನ ಕೆಲಸಗಾರರ ಸಂಖ್ಯೆಯನ್ನು ಅಗತ್ಯವಿದ್ದಷ್ಟೇ ಇರಿಸಿ ಕೊಂಡಿದೆ. ಎಲ್ಲ ಕೆಲಸಗಳೂ ಸಲೀಸಾಗಿ ನಡೆಯುವಂತೆ ಅವನ್ನು ಹಂಚಿಕೊಡಲಾಗಿದೆ.

ಈ ಕಂಪೆನಿಯ ಎಲ್ಲ ನೌಕರರನ್ನು ಮ್ಯಾನೇಜರ್ (ವ್ಯವಸ್ಥಾಪಕ)ಎಂದು ಕರೆಯಲಾಗುತ್ತದೆ. ಇವರು ಹೆಸರಿಗಷ್ಟೇ ವ್ಯವಸ್ಥಾಪಕರಲ್ಲ–ಆ ವಿಭಾಗದ ಪೂರ್ತಿ ಹೊಣೆಗಾರಿಕೆ ಇವರ ಮೇಲಿರುತ್ತದೆ. ಏಕೆಂದರೆ ಇವರ ಮೇಲೆ ಯಾವ ಉಚ್ಚಧಿಕಾರಿಯೂ ಇರುವುದಿಲ್ಲ. ಎಲ್ಲ ಕೆಲಗಳಿಗೂ ಇವರೇ ಹೊಣೆಗಾರರು. ಉದಾಹರಣೆಗಾಗಿ ವಿಮಾನದ ಮ್ಯಾಕೆನಿಕ್‌ಮೆಂಟಿನೆನ್ಸ್‌ಮ್ಯಾನೇಜರ್ ಎನಿಸುತ್ತಾನೆ. ಆತ ಸ್ವತಃ ವಿಮಾನದ ಬಿಡಿ ಭಾಗಗಳನ್ನು ಬದಲಾಯಿಸುವುದರ ಜತೆಗೆ, ಅದರ ದುರಸ್ತಿ, ಮೇಲ್ವಿಚಾರಣೆ ಮೊದಲಾದ ಕೆಲಸ ನೋಡಿಕೊಳ್ಳುತ್ತಾನೆ.

ಇದೇ ರೀತಿ ವಿಮಾನದ ಟಿಕೆಟ್ ಮಾರುವ ಹಾಗೂ ರಿಜರ್ವೇಶನ್ ಮಾಡುವ ಕಾರ್ಯಕರ್ತನ ಕಸ್ಟಮರ್ ಸರ್ವೀಸ್‌ಮ್ಯಾನೇಜರ್ ಎನಿಸುತ್ತಾನೆ. ವಿಮಾನದ ಪೈಲೆಟ್ ಫ್ಲಾಯಿಟ್‌ಮ್ಯಾನೇಜರ್ ಎಂದು ಕರೆಯಲ್ಪಡುವ ಈ ರೀತಿ ಈ ಕಂಪನಿಯಲ್ಲಿ ದೊಡ್ಡ ಹುದ್ದೆ, ಸಣ್ಣ ಹುದ್ದೆ – ಎಂಬ ಭೇದ ಭಾವವಿಲ್ಲ. ಇಲ್ಲಿಯ ೧೨೦೦ ಕೆಲಸಗಾರರು ತಮ್ಮ ತಮ್ಮ ವಿಭಾಗಗಳಿಗೆ ಸ್ವಯಂ ಅಧಿಕಾರಿಗಳು. ಈ ಕಂಪನಿಯಲ್ಲಿ ನೌಕರರ ಯೂನಿಯನ್ ಇರುವುದಿಲ್ಲ. ಹೀಗಾಗಿ ಹರತಾಳ, ಆಂದೋಲನ, ಸತ್ಯಾಗ್ರಹ ಮೊದಲಾದ ಜಂಜಡಗಳೂ ಇಲ್ಲ.

ಈ ಕಂಪನಿಯ ಇನ್ನೊಂದು ವೈಶಿಷ್ಟ ವೆಂದರೆ ಇದರ ಕೆಲಸಗಾರರು ತಮ್ಮ ಕರ್ತವ್ಯಗಳ ಜತೆಗೆ ಇತರ ಕೆಲಸಗಳನ್ನು ಮಾಡುತ್ತಾ ಈ ರೀತಿ ಪ್ರತಿಯೊಬ್ಬನ ಬಳಿಯೂ ಕನಿಷ್ಠ ಎರಡು ವಿಭಾಗಗಳಿರುತ್ತವೆ. ಉದಾಹರಣೆಗಾಗಿ, ಟಿಕೆಟ್ ಮಾರುವಾಗ ಮಾರಾಟದ ಕೆಲಸ ಮುಗಿದ ಬಳಿಕ ವಿಮಾನದೊಳಗೆ ಹೋಗಿ ಅಲ್ಲಿ ವಿಮಾನ ಪರಿ - ಚಾರಕವಾಗಿ ಪ್ರವಾಸಿಗರ ಮೇಲ್ವಿಚಾರಣೆ ನೋಡುತ್ತಾನೆ. ಇದೇ ರೀತಿ ಚಾಲಕ ಹಾರಾಟಕ್ಕೆ ಮುನ್ನ ಮಾಡಬೇಕಾದ ಕೆಲಸಗಳನ್ನು ನೋಡಿಕೊಳ್ಳುತ್ತಾನೆ.

ಇತರ ವಿಮಾನ ಕಂಪನಿಗಳ ಚಾಲಕರು ತಿಂಗಳಿಗೆ ಬರೇ ೭೦ - ೮೦ ತಾಸು ಕೆಲಸ ಮಾಡಿ, ಉಳಿದ ವೇಳೆ ಸುಮ್ಮನೆ ಕುಳಿತ್ತಿದ್ದರೆ, ಪೀಪಲ್ಸ್ ಎಕ್ಸ್‌ಪ್ರೆಸ್ ದ ಚಾಲಕರು ಬಿಡುವೇಳೆಯನ್ನು ಸದುಪಯೋಗಿಸಿ ಕಂಪನಿ ನಷ್ಟಕ್ಕೆ ಬದಲು ಲಾಭದಲ್ಲಿ ನಡೆಯುವಂತೆ ನೋಡಿಕೊಳ್ಳುತ್ತಾರೆ.

ಈ ಕಂಪನಿಯ ಕೆಲ ಷೇರುಗಳನ್ನು ಇದರ ಕೆಲಸಗಾರರಿಗೆ ಅತಿ ಕಡಿಮೆ ಬೆಲೆಯಲ್ಲಿ ಕೊಡಲಾಗುತ್ತದೆ. ಈ ಷೇರುಗಳನ್ನು ಅವರು ಕಡ್ಡಾಯವಾಗಿ ಕೊಳ್ಳಬೇಕು. ಇವಲ್ಲದೆ ಕೆಲವು ಷೇರುಗಳನ್ನು ಇವರು ರಿಯಾಯತಿ ಬೆಲೆಯಲ್ಲೂ ಕೊಳ್ಳಬಹುದು. ಈ ರೀತಿ ಕೆಲಸಗಾರರು ಕಂಪನಿಯ ಪಾಲುದಾರ ಅಥವಾ ಮಾಲೀಕರೆನಿಸುತ್ತಾರೆ. ಉದಾ-ಹರಣೆಗಾಗಿ ಪೀಪಲ್ಸ್ ಎಕ್ಸ್‌ಪ್ರೆಸ್‌ದ ನೌಕರರಿಗೆ ಕೊಡುವ ಕಡ್ಡಾಯ ಷೇರುಗಳಿಗೆ ಮುಕ್ತ ಮಾರುಕಟ್ಟೆಯಲ್ಲಿ ಅದರ ನಾಲ್ಕರಷ್ಟು ಬೆಲೆಯಿದೆ. ಆದರೆ ಹೆಚ್ಚಿನ ಷೇರುಗಳು ಬೇಕಿದ್ದರೆ ಕಡ್ಡಾಯ ಷೇರುಗಳ ಇಮ್ಮಡಿ ಬೆಲೆ ತೆರಬೇಕಾಗುತ್ತದೆ. ಹೀಗಾಗಿ ಕೆಲಸಗಾರರು ಈ ಕಂಪನಿ ತಮ್ಮದೇ ಎಂಬ ಭಾವನೆಯಿಂದ ದುಡಿಯುತ್ತಾರೆ.

**ಯೋಜನೆಯ ಆರಂಭ :–** ಈ ವಿಮಾನ ಕಂಪನಿಯನ್ನು ಡೊನಾಲ್ಡ್ ಬರ್ ಹಾಗೂ ಗೆರಾಲ್ಡ್ ಗಿರ್ನರ್ ಸೇರಿ ಆರಂಭಿಸಲು ಯೋಜನೆ ಹಾಕಿದರು. ಇವರಿಬ್ಬರಿಗೂ ಬೇರೆ ಬೇರೆ ವಿಮಾನ ಕಂಪನಿಗಳಲ್ಲಿ ಉಚ್ಛಧಿಕಾರಿಗಳಾಗಿ ಕೆಲಸ ಮಾಡಿದ ಅನುಭವವಿತ್ತು. ವೆಚ್ಚ ಕಡಿಮೆ ಮಾಡಿ ವಿಮಾನದ ಪ್ರಯಾಣ ದರವನ್ನು ತಗ್ಗಿಸಿದರೆ ಜನ ತಮ್ಮ ವಿಮಾನದಲ್ಲೇ ಪ್ರಯಾಣಿಸುವರೆಂದು ಇವರಿಗೆ ಖಚಿತವಾಗಿತ್ತು.

ಇದಕ್ಕಾಗಿ ಇವರು ನ್ಯೂಯಾರ್ಕ್‌ನ ಬಳಿಯ 'ನ್ಯೂ ಅರ್ಕ್' ಎಂಬ ಸ್ಥಾನವನ್ನು ಈ ಕಂಪನಿಯ ಮುಖ್ಯ ಕಚೇರಿಯನ್ನಾಗಿ ಮಾಡಿಕೊಂಡರು. ನ್ಯೂ ಅರ್ಕ್‌ದಲ್ಲಿ ವಿಮಾನ ಚಲನೆಗೆ ಹೆಚ್ಚಿನ ಸೌಕರ್ಯಗಳಿದ್ದವು. ಏಕೆಂದರೆ ಈ ಸ್ಥಾನ ನ್ಯೂಯಾರ್ಕ್ ವಿಮಾನ ನಿಲ್ದಾಣದಂತೆ ದುಬಾರಿಯಲ್ಲ. ಹೀಗಾಗಿ ಇಲ್ಲಿ ವಿಮಾನ ಇಳಿಯಲು ತೆರಬೇಕಾದ ಫೀ ತುಂಬ ಕಡಿಮೆಯಿತ್ತು. ಇದಲ್ಲದೆ ಈ ಪ್ರದೇಶ ನ್ಯೂಯಾರ್ಕಿಗೆ ತುಂಬ ಹತ್ತಿರವಿದ್ದುದರಿಂದ ಪ್ರವಾಸಿಗರ ಕೊರತೆಯೂ ಉಂಟಾಗುವಂತಿರಲಿಲ್ಲ.

ಇನ್ನು ಪೀಪಲ್ಸ್ ಎಕ್ಸ್‌ಪ್ರೆಸ್ ಹಾರಾಡುವ ಸ್ಥಾನವನ್ನು ಆರಿಸಬೇಕಷ್ಟೇ. ಬೇರೆ ವಿಮಾನಗಳು ಹೆಚ್ಚಾಗಿ ಹೋಗದ ಕಡೆಗಳಲ್ಲೇ ಇದರ ಹಾರಾಟ ನಿರ್ಧರಿಸಲಾಯಿತು. ಆದರೆ ಆ ಜಾಗಗಳಲ್ಲಿ ಪ್ರವಾಸಿಗಳು ದೊರೆಯುವ ನಂಬುಗೆಯೂ ಇತ್ತು.

ನ್ಯೂ ಅರ್ಕ್‌ದಿಂದ ವಿಮಾನಗಳು ಹೋಗಿ ಮತ್ತೆ ಮರಳಿ ಬರುತ್ತಿದ್ದವು. ಹೀಗಾಗಿ ಈ ಕಂಪನಿ ನ್ಯೂ ಅರ್ಕ್‌ದಲ್ಲಿ ಮಾತ್ರ ಹೊಸದಾಗಿ ನಿಲ್ದಾಣ ತಯಾರಿಸಬೇಕಾಯಿತು. ಈ ರೀತಿ ಖರ್ಚು ಸಾಕಷ್ಟು ಕಡಿಮೆಯಾಯಿತು.

೩೦ ೪-೧೯೮೧ ರಂದು ಪೀಪಲ್ ಎಕ್ಸ್‌ಪ್ರೆಸ್ ತನ್ನ ಹಾರಾಟ ಆರಂಭಿಸಿತು. ಇದಕ್ಕಾಗಿ ಅದು ಮೂರು ಹಳೆಯ ಬೋಯಿಂಗ್ ೭೩೭ ವಿಮಾನಗಳನ್ನು ಬಳಸಿತು. ಇವನ್ನು ಅದು ಪಶ್ಚಿಮ ಜರ್ಮನಿಯ ಲುಫ್ತಹಂಸ್ ವಿಮಾನ ಕಂಪೆನಿಯಿಂದ ಕೊಂಡು ಕೊಂಡಿತ್ತು. ಈ ವಿಮಾನಗಳು ದುಬಾರಿ ವೆಚ್ಚದವೂ ಅನುಪಯುಕ್ತವೂ ಆಗಿವೆಯೆಂದು ಆ ಕಂಪೆನಿ ಬೆಲೆಗೆ ಮಾರಾಟ ಮಾಡಿತ್ತು.

ಪೀಪಲ್ ಎಕ್ಸ್‌ಪ್ರೆಸ್ ವಿಮಾನಗಳಲ್ಲಿ ಕೆಲವು ಮಹತ್ವದ ಬದಲಾವಣೆ ಮಾಡಿತು. ಪ್ರಥಮ ದರ್ಜೆಯ ದೊಡ್ಡ ಸೀಟುಗಳನ್ನು ತೆಗೆದುಹಾಕಿ ಅವುಗಳ ಜಾಗದಲ್ಲಿ ಸಾಮಾನ್ಯದರ್ಜೆಯ ಸೀಟು ಹಾಕಿತು. ಇದಲ್ಲದೆ ಊಟದ ಕೋಣೆಗಳಲ್ಲೂ ಸೀಟು ಹಾಕಿಸಿತು. ಈ ರೀತಿ ಲುಫ್ತಹಂಸದ ಹಳೆಯ ವಿಮಾನದ ೯೦ ಸೀಟುಗಳ ಬದಲು ೧೧೮ ಸೀಟುಗಳಾದವು.

ಎಲ್ಲ ರೀತಿಯ ಸಿದ್ಧತೆಗಳ ಪೀಪಲ್ಸ್ ಎಕ್ಸಪ್ರೆಸ್ ಅಮೇರಿಕೆಯ ನಾಲ್ಕಾರು ನಗರಗಳ ನಡುವೆ ಹಾರಾಟ ಆರಂಭಿಸಿತು. ವೆಚ್ಚತಗ್ಗಿಸುವ ದೃಷ್ಟಿಯಿಂದ ಈ ಕಂಪೆನಿ ಯಾತ್ರಿಕರಿಗೆ ಒದಗಿಸುವ ಎಷ್ಟೋ ಸೌಲಭ್ಯಗಳನ್ನು ನಿಲ್ಲಿಸಿತು. ಉದಾಹರಣೆಗಾಗಿ, ಪ್ರವಾಸಿಗರು ವಿಮಾನದವರೆಗೆ ತಮ್ಮ ಸಾಮಾನುಗಳನ್ನು ತಾವೇ ಹೊತ್ತು ತರಬೇಕಾಗುತ್ತದೆ. ಅಥವಾ ಅದಕ್ಕಾಗಿ ಪ್ರತ್ಯೇಕವಾಗಿ ಹಣ ಕೊಡಬೇಕಾಗುತ್ತದೆ. ಬೇರೆ ವಿಮಾನ ಕಂಪೆನಿಗಳು ಈ ಕೆಲಸವನ್ನು ಪುಕ್ಕಟೆಯಾಗಿ ಮಾಡುತ್ತವೆ.

ಇದಲ್ಲದೆ ಈ ವಿಮಾನದಲ್ಲಿ ಪುಕ್ಕಟೆ ಚಹ, ಕಾಫಿ ಅಥವಾ ಟಿಫಿನ್ ವ್ಯವ
ಇಲ್ಲ. ಯಾರಿಗಾದರೂ ಕಾಫಿ ತಿಂಡಿ ಬೇಕಿದ್ದರೆ ಪ್ರತ್ಯೇಕ ಹಣ ಕೊಡಬೇಕಾಗುವುದ
ಆದರೆ ಈ ಕೃತಕ ವ್ಯವಸ್ಥೆಗಳ ಬದಲು ಯಾತ್ರಿಕರಿಗೆ ಪೂರ್ಣ ವಿಶ್ರಾಂತಿಯ ಏರ್ಪಾ
ಮಾಡಲಾಗುವುದೆಂದು ಕಂಪೆನಿಯ ವ್ಯವಸ್ಥಾಪಕರ ಹೇಳಿ
ಪ್ರವಾಸಿಗರ ಪ್ರತಿಯೊಂದು ತೊಂದರೆಯನ್ನು ನಿವಾರಿಸಲು ಪ್ರಯತ್ನಿಸಲಾಗುತ್ತ

ಮೆಲ್ಲ ಮೆಲ್ಲನೆ ಪೀಪಲ್ಸ್ ಎಕ್ಸ್‌ಪ್ರೆಸ್ ತನ್ನ ಸೇವೆಯನ್ನು ವಿಸ್ತರಿಸತೊಡಗಿತ
೨೨ ಹಳೆಯ ಬೋಯಿಂಗ್ ೭೩೭ ವಿಮಾನಗಳನ್ನು ಮತ್ತೆ ಕೊಂಡುಕೊಂಡಿತ
ಈಗ ಅದು ತನ್ನ ಪ್ರವಾಸಕ್ಕೆ ಹೊಸ ಹೊಸ ಸ್ಥಾನಗಳನ್ನು ಆರಿಸಿಕೊಂಡಿತು.

ಈ ಕಂಪೆನಿ ಮೊದಲ ವರ್ಷ (೧೯೮೧) ಸುಮಾರು ಏಳು ಕೋಟಿ ರೂಪಾ
ನಷ್ಟ ಅನುಭವಿಸಿತು. ಆದರೆ ೧೯೮೨ ರಲ್ಲಿ ಇದು ಸುಮಾರು ೧೦ ಕೋಟಿ ರೂಪಾ
ಲಾಭ ಪಡೆಯಿತು. ಇಷ್ಟೇ ಅಲ್ಲದೆ ಇದು ಈಗ ಹೆಚ್ಚು ಹೆಚ್ಚು ವಿಮಾನಗಳನ
ಕೊಳ್ಳುತ್ತಲಿದೆ.

ಪೀಪಲ್ಸ್ ಎಕ್ಸ್‌ಪ್ರೆಸ್‌ದ ನಿರಂತರ ಪ್ರಗತಿಯಿಂದಾಗಿ ಅಮೇರಿಕೆಯ ದೊ
ದೊಡ್ಡ ವಿಮಾನ ಕಂಪೆನಿಗಳು ಎಚ್ಚತ್ತಿವೆ. ಎಷ್ಟೋ ಕಡೆ ಪ್ರತಿಸ್ಪರ್ಧೆಯ ದೃಷ್ಟಿ
ಯಿಂದ ಆ ಕಂಪೆನಿಗಳೂ ತಮ್ಮ ದರವನ್ನು ತಗ್ಗಿಸಿವೆ. ಈ ರೀತಿ ಒಂದು ಪು
ವಿಮಾನ ಕಂಪೆನಿ ದೊಡ್ಡ ದೊಡ್ಡ ವಿಮಾನ ಕಂಪೆನಿಗಳನ್ನು ಹಿಂದೆ ಹಾಕಿ ಜನತೆ
ಹೃದಯದಲ್ಲಿ ತನ್ನ ಸ್ಥಾನ ಭದ್ರಪಡಿಸಿಕೊಂಡಿದೆ.

# ವಿಶ್ವ ಹಿಂದು ಪರಿಷದ್ ಕರ್ನಾಟಕ

ಶಂಕರಪುರ–ಬೆಂಗಳೂರು-4

## ಮಲ ತಿನ್ನಿಸಿದ ಪ್ರಕರಣ ಅತೀ ಹೇಯವಾದ ಕೃತ್ಯ

ನೊರಬ ತಾಲ್ಲೂಕಿನ ತತ್ತೂರು ಗ್ರಾಮದಲ್ಲಿ ಉಪೇಕ್ಷಿತ ವರ್ಗದ ಶ್ರೀ ಚಂದ್ರಪ್ಪನವರಿಗೆ ಮಲ ತಿನ್ನಿಸಿದರೆಂದು ವರದಿಯಾಗಿರುವ ಪ್ರಕರಣ ಇಡೀ ಹಿಂದೂ ಸಮಾಜವೇ ನಾಚಿಕೆಯಿಂದ ತಲೆ ತಗ್ಗಿಸಬೇಕಾದ ಅತ್ಯಂತ ಹೇಯ ಕೃತ್ಯವಾಗಿದೆ.

ದೇವಸ್ಥಾನದಲ್ಲಿ ಪೂಜಾವಕಾಶ ಬೇಡಿ ತನ್ನ ಹಿಂದುತ್ವದ ಅಭಿಮಾನವನ್ನು ಪ್ರಕಟ ಮಾಡಿದ ಶ್ರೀ ಚಂದ್ರಪ್ಪನವರಿಗೆ ಆತ್ಮೀಯ ಸ್ವಾಗತ ದೊರಕುವ ಬದಲು ಮಲ ತಿನ್ನಬೇಕಾದ ಅತೀ ಹೀನವಾದ ಪರಿಸ್ಥಿತಿ ಒದಗಿಬಂದುದು ಹಿಂದುಸಮಾಜದ ದೌರ್ಭಾಗ್ಯವೇ ಸರಿ. ಇಂತಹ ಅಮಾನವೀಯ ಕೃತ್ಯವನು ಅತ್ಯುಗ್ರವಾಗಿ ಖಂಡಿಸುತ್ತಾ, ಸರ್ಕಾರವು ಈ ದುಷ್ಕಾರ್ಯಕ್ಕೆ ಕಾರಣ-ಕರ್ತರಾದವರ ಮೇಲೆ ಕಠಿಣ ಕ್ರಮ ಕೈಗೊಳ್ಳಬೇಕೆಂದು ವಿಶ್ವ ಹಿಂದು ಪರಿಷದ್ ಒತ್ತಾಯಿಸುತ್ತದೆ.

ಹಿಂದು ಸಮಾಜದ ಮೇಲೆ ವ್ಯಾಪಕವಾದ ಹಾಗೂ ವ್ಯವಸ್ಥಿತವಾದ ಅಪಪ್ರಚಾರ ನಡೆಯುತ್ತಿರುವ ವಿಚಿತ್ರ ಸನ್ನಿವೇಶದಲ್ಲಿ ಹಿಂದು ಸಮಾಜಬಾಂಧವರು ಪರಸ್ಪರರಲ್ಲಿ ಸೌಹಾರ್ದದ ವರ್ತನೆ ತೋರುವ ಬದಲು, ತತ್ತೂರು ಬಿಂಡಿಗೇರಿಯಲ್ಲಿ ನಡೆದಂತಹ ಅಮಾನುಷ ಕೃತ್ಯಗಳನ್ನೆಸಗಿ ಹಿಂದು ಸಮಾಜಕ್ಕೆ ಅಪಚಾರವೆಸಗುತ್ತಿರುವುದು ಎಲ್ಲಾ ಶ್ರದ್ಧಾವಂತ ಹಿಂದುಗಳನ್ನೂ ಕಂಗೆಡಿಸಿದೆ. ಉಪೇಕ್ಷಿತ ಬಂಧುಗಳು ಗೌರವ ಹಾಗು ಮರ್ಯಾದೆಯಿಂದ ಬಾಳಲು ಸಾಧ್ಯವಾಗುವಂತಹ ಸಾಮಾಜಿಕ ಸಮಾನತೆಯ ವಾತಾವರಣವನ್ನು ಮೂಡಿಸಬೇಕೆಂದು ವಿಶ್ವ ಹಿಂದು ಪರಿಷದ್ ಹಿಂದು ಬಾಂಧವರಲ್ಲಿ ಕಳಕಳಿಯಿಂದ ವಿನಂತಿಸುತ್ತದೆ.

**ಅರವಿಂದಬಾಬು ಆಳವಣಿ**

ಪ್ರಾಂತೀಯ ಪ್ರಧಾನ ಕಾರ್ಯದರ್ಶಿ.

( ಮುಂದುವರಿದಿದೆ )

# ಕೃಷಿಯಲ್ಲಿ ಮಹಿಳೆ

–ಡಿ. ವೆಂಕಟರಾವ್ ಎಂ.ಎ. ಪ್ರಾಚಾರ್ಯರು. ಜಂದನ . ಹಾಸನ.

**ಸಮಸ್ಯೆಗಳು–** ಗ್ರಾಮೀಣ ಆರ್ಥಿಕತೆಗೆ, ಕೃಷಿ ಅಭಿವೃದ್ಧಿಗೆ ಕೃಷಿ ಕಾರ್ಮಿಕ ಮಹಿಳೆಯರ ಕೊಡುಗೆ ಬಹಳಷ್ಟು. ಪುರುಷ ಪ್ರಬಲ, ಹೆಣ್ಣು ಅಬಲೆ ಎಂದು ಹೇಳಲಾಗಿದೆ. ಆದರೆ ಕೃಷಿಯಲ್ಲಿ ಹೆಣ್ಣಿನ ದುಡಿಮೆಯ ಪರಿಯನ್ನು ನೋಡಿದಾಗ ಈ ಮಾತಿಗೆ ಅರ್ಥವಿಲ್ಲ ಎನಿಸುತ್ತದೆ. ಹೆಂಗಸರಿಗೆ ದೇಹ ದಾರ್ಢ್ಯ ಇಲ್ಲದಿರಬಹುದು, ಆದರೆ ಅವರಿಗಿರುವ ಮನೋದಾರ್ಢ್ಯ ಈ ಕೊರತೆಯನ್ನು ಮುಚ್ಚಿ ಬಿಡುತ್ತದೆ. ಇದರಿಂದಾಗಿಯೇ ಅವರು ಗಂಡಸರೊಂದಿಗೆ ಸರಿಸಮನಾಗಿ ದುಡಿಯುವುದು ಸಾಧ್ಯವಾಗಿದೆ. ಅವರಿಗಿರುವ ಕಾರ್ಯದಕ್ಷತೆ, ತನ್ಮಯತೆ, ವಿಧೇಯತೆ ಹಾಗೂ ಧೈರ್ಯ ಸ್ಥೈರ್ಯಗಳು ವರ್ಣಿಸಲಸದಳ. ಹೊಲ, ಗದ್ದೆ, ತೋಟಗಳಲ್ಲಿ ಪುರುಷರಿಗಿಂತಲೂ ಅವರ ದುಡಿಮೆಯೇ ಹೆಚ್ಚು ಪಟ್ಟು. ಆದರೆ ಮಹಿಳಾ ಕೃಷಿಕಾರ್ಮಿಕರು ಎಂತಹ ದುರ್ಭರ ಪರಿಸ್ಥಿತಿಯಲ್ಲಿ ಬದುಕುತ್ತಿದ್ದಾರೆ ಎಂಬುದನ್ನು ಅರಿತಾಗ ಯಾರಿಗಾದರೂ ಕರುಣೆ ಮೂಡದಿರದು. ಭಾರತದ ಜನಾಂಗದಲ್ಲೇ ಇವರು ಉಪೇಕ್ಷಿಸಲ್ಪಟ್ಟಿದ್ದಾರೆ ಬಡತನ, ಕೆಳಮಟ್ಟದ ಜೀವನ ಸ್ಥಿತಿ, ಅತಿ ಅನಾರೋಗ್ಯ. ಶಿಕ್ಷಣದ ಕೊರತೆ, ನಿಕೃಷ್ಟ ಜೀವನ ಸೌಲಭ್ಯ ಇವು ಮಹಿಳಾ ಕೃಷಿಕಾರ್ಮಿಕರ ಸಾಮಾನ್ಯ ಲಕ್ಷಣಗಳು. ಕೃಷಿಯ ವಿಶಿಷ್ಟ ಸಮಸ್ಯೆಗಳ ಪೈಕಿ ಮಹಿಳಾ ಕೃಷಿ ಕಾರ್ಮಿಕರ ಸಮಸ್ಯೆ ಪ್ರಧಾನವೂ ಮತ್ತು ಗಂಭೀರವೂ ಆಗಿದೆ, ಅಷ್ಟೇ ಅಲ್ಲ, ಇತರ ಉದ್ಯೋಗಗಳಲ್ಲಿನ ಕಾರ್ಮಿಕ ಸಮಸ್ಯೆಗಿಂತ ಭಿನ್ನವಾಗಿದೆ. ಈ ಸಮಸ್ಯೆಗೆ ನೂರೆಂಟು ಮುಖ.

**ಉದ್ಯೋಗ ಅಭಾವ:–** ಭಾರತದಲ್ಲಿ ಕೃಷಿ ವಿಚಿತ್ರ ಪರಿಸ್ಥಿತಿಯೊಂದಿಗೆ ಹೆಣೆದುಕೊಂಡಿದೆ. ಕೃಷಿಯ ಋತುಮಾನದ ಉದ್ದಿಮೆಯಾಗಿದ್ದು ಅದರ ಕಾರ್ಯಗಳು ಋತುಗಳಿಗನುಸಾರವಾಗಿ ನಡೆಯಬೇಕಾಗಿರುತ್ತದೆ. ಆದ್ದರಿಂದ ಎಲ್ಲಾ ಹಂತಗಳಲ್ಲೂ ಮಹಿಳಾ ಕೃಷಿ ಕಾರ್ಮಿಕರ ಸೇವೆಯ ಆವಶ್ಯಕತೆ ಸತತವಾಗಿ ಇರುವುದಿಲ್ಲ ಹೀಗಾಗಿ ಇಲ್ಲಿ ನಿರುದ್ಯೋಗ ಅತಿ ಸಾಮಾನ್ಯ. ಕೆಲವು ಸಂದರ್ಭಗಳಲ್ಲಿ ಒಂದೇ ಬೆಳೆಯನ್ನು ಬೆಳೆಯಬೇಕಾದಾಗ ಮಹಿಳಾ ಕೃಷಿ ಕಾರ್ಮಿಕರಿಗೆ ಕೇವಲ ವರ್ಷದಲ್ಲಿ 6 ರಿಂದ 7 ತಿಂಗಳವರೆಗೆ ಮಾತ್ರ ಉದ್ಯೋಗ ವಿರುತ್ತದೆ. ಈ ಬಗೆಯ ಅತಿ ಉದ್ಯೋಗ ಮತ್ತು ನಿರುದ್ಯೋಗಗಳು ಅವರ ಕಡಿಮೆ ಆದಾಯಕ್ಕೆ ದಾರಿ ಮಾಡಿಕೊಡುತ್ತವೆ

**ಬೇಡಿಕೆ ಮತ್ತು ಪೂರೈಕೆ.** ಗ್ರಾಮಾಂತರ ಪ್ರದೇಶಗಳಲ್ಲಿ ಮಹಿಳಾ ಕೃಷಿಕಾರ್ಮಿಕರಿಗೆ ದೊರಕುವ ಕೃಷಿ ಕೆಲಸ ಆಯಾ ಗ್ರಾಮಗಳಲ್ಲಿ ಸಾಗುವಳಿಯಾಗುವ ಜಮೀನಿನ

ವಿಸ್ತೀರ್ಣ, ಕೃಷಿಕಾರ್ಮಿಕರ ಸಂಖ್ಯೆ, ಕೆಲಸಕ್ಕೆ ನೇಮಿಸಿಕೊಳ್ಳುವವರ ಮನೋಭಾವ ಇತ್ಯಾದಿಗಳನ್ನು ಅವಲಂಬಿಸಿರುತ್ತದೆ. ಕೆಲವು ಪ್ರದೇಶಗಳಲ್ಲಿ ಜಮೀನಿನ ವಿಸ್ತೀರ್ಣಕಡಿಮೆ ಇದ್ದು, ಕಾರ್ಮಿಕರ ಸಂಖ್ಯೆ ಅಧಿಕವಾಗಿದ್ದಲ್ಲಿ ಸ್ಪರ್ಧೆ ತೀವ್ರವಾಗಿದ್ದು ಎಲ್ಲರಿಗೂ ಕೆಲಸ ಸಿಗುವ ಸಂಭವ ಕಡಿಮೆ. ಇದರ ಜೊತೆಗೆ ಮಹಿಳಾ ಕಾರ್ಮಿಕರು ಮಾಲೀಕರ ವಿರುದ್ಧ ಧ್ವನಿ ಎತ್ತದೆ ಅವರ ಮರ್ಜಿಗೆ ಅನುಸಾರವಾಗಿ ನಡೆದರೆ ಮಾತ್ರ ಕೆಲಸ. ಮಹಿಳಾ ಕೃಷಿ ಕಾರ್ಮಿಕರಿಗೆ ಬೇಡಿಕೆ ಋತುವನ್ನವಲಂಬಿಸಿರುತ್ತದೆ. ಜೊತೆಗೆ ಭೂ ಹಿಡುವಳಿಗಳ ಗಾತ್ರದ ಮೇಲೆ ಹಾಗೂ ಯಾವ ಯಾವ ಬೆಳೆಯನ್ನು ಬೆಳೆಯಲಾಗುತ್ತದೆ, ಎಂಬುದರ ಮೇಲೆ ಕೃಷಿ ಕಾರ್ಮಿಕರ ಬೇಡಿಕೆ ನಿಂತಿದೆ ಸಾಮಾನ್ಯವಾಗಿ ಕೊಯ್ಲು, ಕಳೆ ತೆಗೆಯುವ ಹಾಗೂ ನಾಟಿ ಮಾಡುವ ದಿನಗಳಲ್ಲಿ ಮಹಿಳಾ ಕೃಷಿಕಾರ್ಮಿಕರಿಗೆ ಅಧಿಕ ಬೇಡಿಕೆ ಇರುತ್ತದೆ. ಈ ಬೇಡಿಕೆ ನಿರಂತರವಾಗಿರುವುದಿಲ್ಲ ಸಾಮನ್ಯವಾಗಿ ಹಳ್ಳಿಗಳಲ್ಲಿ ಅವಿಭಕ್ತ ಕುಟುಂಬ ಗಳೇ ಹೆಚ್ಚಾಗಿರುವುದರಿಂದ ದುಡಿಯುವವರ ಸಂಖ್ಯೆಯೂ ಅಧಿಕ ಪ್ರಮಾಣದಲ್ಲಿರುತ್ತದೆ ಕುಟುಂಬದ ಎಲ್ಲಾ ಸದಸ್ಯರೂ ಕೃಷಿ ಕಾರ್ಯಗಳನ್ನು ಮಾಡಲು ಮುಂದೆ ಬರುತ್ತಾರೆ. ಹೀಗೆ ಕಾರ್ಮಿಕರ ಪೂರೈಕೆ ನಿರಂತರ ವಾಗಿರುತ್ತದೆ. ಪೂರೈಕೆ ಹೆಚ್ಚು-ಬೇಡಿಕೆ ಕಡಿಮೆ. ಈ ಪರಿಸ್ಥಿತಿಯಲ್ಲಿ ಅವರಿಗೆ ದೊರೆಯುವ ವೇತನವೂ ಅಲ್ಪಪ್ರಮಾಣದ್ದು. ಅನೇಕ ಸಂದರ್ಭಗಳಲ್ಲಿ ಕೂಲಿಗೆ ಬದಲಾಗಿ ಮಾಲೀಕರು ಕೊಟ್ಟಷ್ಟು ಕಾಳುಗಳಿಂದಲೇ ಇವರು ತೃಪ್ತಿ ಪಟ್ಟು ಕೊಳ್ಳ ಬೇಕಾಗುತ್ತದೆ. ಆರ್ಥಿಕವಾಗಿ ಅತಿದುರ್ಬಲವಾಗಿರುವ ಇವರು ಕೆಲವು ಸಂದರ್ಭಗಳಲ್ಲಿ ಭೂಮಾಲಿಕರಿಗೆ ಕುರಿ ಕೋಳಿ ಇತ್ಯಾದಿಗಳನ್ನು ಕಾಣಿಕೆಯಾಗಿ ಕೊಡಬೇಕಾಗುತ್ತದೆ.

**ಕೃಷಿಯೇತರ ಉದ್ಯೋಗಗಳ ಅಭಾವ:** — ಹಳ್ಳಿಗಳಲ್ಲಿ ಬೇರೆ ಸಣ್ಣ ಉದ್ಯಮಗಳು ಇಲ್ಲದಿರುವದರಿಂದ ಹಾಗು ಕುಶಲ ಕೆಲಸಗಳಿಗೆ ತರಬೇತಿ ಅವಕಾಶ ಇಲ್ಲದಿರುವದರಿಂದ ಬಡ ಮತ್ತು ಭೂಹೀನ ಕುಟುಂಬಗಳ ಮಹಿಳೆಯರಿಗೆ ಕೃಷಿಕೂಲಿ ಕೆಲಸವಲ್ಲದೆ ಬೇರೇನೂ ಸಿಗುವುದಿಲ್ಲ. ದಿನಗೂಲಿಯ ಮೇಲೆ ಕೆಲಸ ಮಾಡುವ ಮಹಿಳೆಯರ ಕಷ್ಟ ಹೇಳ ತೀರದು. ಇವರ ಕೆಲಸವೂ ನಿಶ್ಚಿತವಲ್ಲ. ಕೃಷಿ ಕೆಲಸಕ್ಕೆ ಹೆಚ್ಚಿನ ಕೌಶಲವಾಗಲಿ, ಅನುಭವ--ತರಬೇತಿಗಳಾಗಲೀ, ಬೇಕಿಲ್ಲದಿರುವದರಿಂದ ಹೆಣ್ಣು ಮಕ್ಕಳೆಲ್ಲರೂ ಕುಟುಂಬದ ಆದಾಯವನ್ನು ಹೆಚ್ಚಿಸಿ ಕೊಳುವ ಸಲುವಾಗಿ ಕೃಷಿ ಕೆಲಸಗಳಲ್ಲಿ ತೊಡಗುತ್ತಾರೆ ಮಳೆ ಇಲ್ಲದೆ ಹಾಳಾಗುವ ರೈತ ಕುಟುಂಬಗಳು, ಗ್ರಾಮೀಣ ಆರ್ಥಿಕತೆ ಕೆಡುತ್ತಾ ಬಂದಂತೆ ದಿವಾಳಿ ಏಳುವ ಕುಟುಂಬಗಳು, ದುಡಿಯುವ ಮಹಿಳೆಯರ ಸಂಖ್ಯೆಯನ್ನು ಹೆಚ್ಚಿಸುತ್ತಿವೆ. ಇವರಿಗೆ ಬದಲಿ ಉದ್ಯೋಗವಾಗಲಿ, ಪೂರಕ ಉದ್ಯೋಗಾವಕಾಶಗಳಾಗಲಿ ಇಲ್ಲದಿರುವುದು ಇವರ ಶೋಚನೀಯ ಬದುಕಿಗೆ ಮತ್ತಷ್ಟು ಕಾರಣವಾಗಿದೆ. ಜನಸಂಖ್ಯೆಯು ತ್ವರಿತ ವೇಗದಲ್ಲಿ ಬೆಳೆಯುತ್ತಿರುವುದರಿಂದ ಭೂರಹಿತ ಕಾರ್ಮಿಕರ

ಸಂಖ್ಯೆಯೂ ಅದೇ ವೇಗದಲ್ಲಿ ಭರದಿಂದ ಅರ್ಥಿಕಗೊಳ್ಳುತ್ತಿದೆ. ಇದಕ್ಕೆ ಅನುಗುಣವಾಗಿ ಇತರ ಉದ್ಯೋಗಾವಕಾಶಗಳು ಲಭ್ಯವಾಗದೆ ಭೂಮಿಯ ಮೇಲಿನ ಒತ್ತಡ ಹೆಚ್ಚುತ್ತಿದೆ ಇದರೊಂದಿಗೆ ಮಹಿಳಾ ಕೃಷಿ ಕಾರ್ಮಿಕರು ಕುಶಲ ಕರ್ಮಿಗಳಲ್ಲವಾದ್ದರಿಂದ ಅವರಿಗೆ ದಕ್ಕುವ ಕೂಲಿ ಕಡಿಮೆ. ಕೆಲವು ಕಡೆಗಳಲ್ಲಿ ಬೀಡಿ ಉದ್ಯಮ ಬೃಹತ್ತಾಗಿ ಬೆಳೆದಿರುವುದರಿಂದ ಅಲ್ಲಿ ಗ್ರಾಮೀಣ ಮಹಿಳೆಯರು ಬೀಡಿ ಕಟ್ಟಿ ಸಂಪಾದಿಸುತ್ತಾರೆ. ಬಿಸಿಲು ಮಳೆಯಲ್ಲಿ ಕೃಷಿ ಕೆಲಸಮಾಡುವುದಕ್ಕಿಂತಲೂ ಮನೆಯಲ್ಲೇ ಕುಳಿತು ಬೀಡಿ ಕಟ್ಟುವುದು ಸುಲಭ ಎಂದು ಭಾವನೆಯಿಂದಾಗಿ ಈ ಕೆಲಸ ಮಹಿಳೆಯರು ಕೈಗೊಳ್ಳುವುದು ಇತ್ತೀಚೆಗೆ ಹೆಚ್ಚಾಗಿದೆ ಆದರೆ ಇತಹ ಉದ್ಯಮಗಳು ಇಲ್ಲದ ಪ್ರದೇಶಗಳಲ್ಲಿ ಮಹಿಳಾ ಕಾರ್ಮಿಕರು ಕೃಷಿಕೆಲಸಗಳನ್ನು ಕೈಗೊಳ್ಳುವುದು ಅನಿವಾರ್ಯವಾಗಿದೆ.

**ದೀರ್ಘ ಕೆಲಸದ ಅವಧಿ :** ಮಹಿಳಾ ಕೃಷಿ **ಕಾರ್ಮಿಕರ** ಕೆಲಸದ ವೇಳೆಯಲ್ಲೂ ನಿಗದಿ ಇಲ್ಲ. ಸೂರ್ಯ ಮುಳುಗುವವರೆಗೂ ಅವರು ಬೆವರು ಹರಿಸಿ ದುಡಿಯಬೇಕು. ಸುಗ್ಗಿಯ ಸಮಯ ಬಂತೆಂದರೆ ರಾತ್ರಿಯ ವೇಳೆಯೂ ಕೆಲಸ ಮಾಡಬೇಕು ಅನೇಕ ಬಾರಿ ಅಧಿಕ ವೇಳೆಯ ದುಡಿಮೆಯೊಂದಿಗೆ ಬಲಾತ್ಕಾರವಾಗಿ ಮಾಲೀಕರಿಗೆ ಸೇವೆ ಸಲ್ಲಿಸ ಬೇಕಾಗುತ್ತದೆ. ಕೃಷಿಯ ಸ್ವರೂಪಕ್ಕೆ ತಕ್ಕಂತೆ ಕೃಷಿಕ್ಷೇತ್ರದಲ್ಲಿ ಕೆಲಸದ ವೇಳೆಯನ್ನು ನಿಗದಿ ಪಡಿಸುವದೂ ಅಸಾಧ್ಯ. ಹೀಗಾಗಿ ಮಹಿಳಾ ಕೃಷಿಕಾರ್ಮಿಕರ ಅವ್ಯಾಹತ ಶೋಷಣೆಗೆ ಸುಗಮಮಾರ್ಗ ಕಲ್ಪಿಸಿ ಕೊಟ್ಟಂತಾಗಿದೆ.

**ಚಲನ ಶೀಲತೆ ಇಲ್ಲದಿರುವುದು:**—ಮಳೆ ಆಧಾರಿತ ಕೃಷಿ ಕೆಲಸದ ಏಳ್ಗು, ಬೀಳುಗಳಿಂದಾಗಿ, ವರ್ಷ ಪೂರ್ತಿ ಉದ್ಯೋಗ ಇಲ್ಲದಿರುವುದರಿಂದಾಗಿ ದಿನಗಳೆದಂತೆ ಬದುಕಲು ಅಸಾಧ್ಯಾವಾಗುತ್ತಿರುವ ಪರಿಸ್ಥಿತಿಯನ್ನು ಕೃಷಿ ಕಾರ್ಮಿಕರು ಎದುರಿಸಬೇಕಾಗಿ ಬಂದಿದೆ. ಬದುಕು ಅಸಹನೀಯವಾಗುತ್ತಿದ್ದಂತೆ ಅವರು ತಮ್ಮನ್ನು ನಂಬಿ ನೆಚ್ಚಿದ್ದ ಮಡದಿ-ಮಕ್ಕಳನ್ನು ದೂರ ಮಾಡಿ ನಗರಗಳತ್ತ ಹೊರಡುತ್ತಿದ್ದಾರೆ. ನಗರಗಳಲ್ಲಿ ಮಾಡುವ ಸಣ್ಣ ಕೂಲಿ ಕೆಲಸವೂ ಕೃಷಿ ಕೆಲಸಕ್ಕಿಂತಲೂ ಹೆಚ್ಚು ಕೂಲಿ ತರುವ ಆಕರ್ಷಣೆ, ಜೊತೆಗೆ ಉದ್ಯೋಗದ ವೈವಿಧ್ಯ ಅವರನ್ನು ಸೆಳೆಯುತ್ತಿದೆ. ಆದರೆ ಗ್ರಾಮೀಣ ಮಹಿಳೆಯರಿಗೆ ಇಂತಹ ಅವಕಾಶವಿಲ್ಲ. ಇದಕ್ಕೆ ಕಾರಣ ಪುರುಷರಷ್ಟು ಚಲನ-ಶೀಲತೆಯನ್ನು ಸಮಾಜ ಅವರಿಗೆ ನೀಡಿಲ್ಲದಿರುವುದು. ಒಬ್ಬಂಟಿಯಾಗಿ ಮಹಿಳೆ ಕೆಲಸ ಹುಡುಕಿ ಹೋಗುವುದು ಸಾಮಾನ್ಯವಾಗಿ ಸಾಧ್ಯವಿಲ್ಲ. ಹೀಗಾಗಿ ಬಡ-ಮಹಿಳೆಯರು ಕೃಷಿ ಕೂಲಿಯಿಂದಲೇ ಜೀವನ ನಿರ್ವಹಿಸಬೇಕಾಗಿ ಬಂದಿದೆ. ಈ ಕಾರಣದಿಂದಾಗಿಯೇ ಇತ್ತೀಚೆಗೆ ದೇಶದ ಕೃಷಿ ಕಾರ್ಮಿಕರಲ್ಲಿ ಪುರುಷರ ಸಂಖ್ಯೆ ಕೇವಲ ಶೇಕಡ ೭ರಷ್ಟು ಹೆಚ್ಚಿದ್ದರೆ ಮಹಿಳೆಯರ ಸಂಖ್ಯೆ ಶೇಕಡ 57 ರಷ್ಟು ಹೆಚ್ಚಿದೆ. ಆದರೂ ಇದಕ್ಕೆ ಅಪವಾದವಾಗಿ ಘಟ್ಟ ಪ್ರದೇಶದ ಮಹಿಳೆಯರು ಊರಿಂದೂರಿಗೆ ಕೂಲಿ ಅರಸಿ ಹೋಗುವುದುಂಟು.

( ಮುಂದುವರೆಯುತ್ತದೆ )

# ಉಷ್ಟ್ರಪಕ್ಷಿ

ಪ. ರಾಮಕೃಷ್ಣ ಶಾಸ್ತ್ರಿ
"ಶಿವಶಕ್ತಿ ನಿಲಯ" ಅಂಚೆ.ಮಚ್ಚಿನ 574295, ಮಡಂತ್ಯಾರ್ (ದ.ಕ)

ಜಗತ್ತಿನಲ್ಲಿ ಅತ್ಯಂತ ದೊಡ್ಡ ಪಕ್ಷಿ ಉಷ್ಟ್ರ ಅಥವಾ ಆಸ್ಟ್ರಿಚ್. ದಕ್ಷಿಣ ಆಫ್ರಿಕದ ಕೆನ್ಯಾ ಮತ್ತು ಸಿರಿಯಾ ರಾಜ್ಯಗಳ ಬಯಲು ಪ್ರದೇಶಗಳಲ್ಲಿಯೂ ಅರ. ಬಸ್ತಾನದ ಮರಳು ಪ್ರಾಂತ್ಯಗಳಲ್ಲಿಯೂ ಮಾತ್ರ ಅವುಗಳನ್ನು ಕಾಣಬಹುದು. ಪೂರ್ತಿ ಬೆಳೆದಗಂಡು ಪಕ್ಷಿ ೮ ಅಡಿ ಎತ್ತರ, 200 ಪೌಂಡಿಗಿಂತ ಹೆಚ್ಚು ಭಾರವಿರು- ವುದು. ಹೆಣ್ಣು ಹಕ್ಕಿಯು ತೂಕ,ಗಾತ್ರ ಅದಕ್ಕಿಂತ ಕಡಮೆ. ಉಷ್ಟ್ರದ ಕೊರಳು ಉದ್ದ. ಕಾಲು ನೀಳವಾಗಿ, ದಪ್ಪವಾಗಿ ಗಡುಸಾಗಿದೆ. ಕಣ್ಣುಗಳು ದೊಡ್ಡದಾಗಿರುವುದರಿಂದ ದೃಷ್ಟಿ ಬಹು ಚುರುಕು. ಕಣ್ಣುಗಳ ರಕ್ಷಣೆಗೆ ನೀಳವಾದರೆ ಪ್ಪೆಗಳಿವೆ. ಶರೀರವಲ್ಲಿ ಕಪ್ಪಾದ ಗರಿಗಳಿವೆ. ರೆಕ್ಕೆಯ ಗರಿಗಳು ಬಿಳಿಯಾಗಿವೆ. ಈ ಹಕ್ಕಿಗಳಲ್ಲಿ ೯ ವರ್ಗಗಳಿವೆ.

ಉಷ್ಟ್ರಪಕ್ಷಿಯ ಎದೆ ಎಲುಬುಗಳು ಹಾರಲು ಶಕ್ತಿಯನ್ನು ನೀಡುವ ಸ್ನಾಯುಗಳಿಗೆ ಅಂಟಿ ಕೊಂಡಿರದ ಕಾರಣ ಇವು ಹಾರಲಾರವು. ಆದರೆ ತಾಸಿಗೆ ೬೦ ಮೈಲು ವೇಗದಲ್ಲಿ ಓಡಬಲ್ಲವು. ಮೊದಲಿನ ಅರ್ಧ ಮೈಲು ತಾಸಿಗೆ ೩೦ ಮೈಲು ವೇಗದಲ್ಲಿ ಓಡಬಲ್ಲುವು ಮೊದಲಿನ ಅರ್ಧ ಮೈಲು ತಾಸಿಗೆ ೪೦ ಮೈಲು ವೇಗದಲ್ಲಿರುತ್ತವೆ ಒಂದೊಂದು ಹೆಜ್ಜೆಯ ಅಂತರ ೧೫ ಅಡಿಯಿರುತ್ತದೆ ಎಲ್ಲಾ ಪಕ್ಷಿಗಳಿಗೂ ಮೂರು ಬೆರಳುವುದಾದರೆ ಉಷ್ಟ್ರಪಕ್ಷಿಗೆ ಚಪ್ಪಟೆ ಭೂಮಿಯಲ್ಲೂ ಓಡಲು ಅನುಕೂಲವಾಗುವಂತೆ ಎರಡು ಬೆರಳುಗಳಿವೆ. ಈ ಪಕ್ಷಿಯ ಮೇಲೆ ಮನುಷ್ಯರು ಸವಾರಿ ಮಾಡಬಹುದು. ಅದನ್ನು ಎತ್ತಿನಂತೆ ಚಿಕ್ಕ ಗಾಡಿಗೂ ಕಟ್ಟಿ ಎಳೆಯಿಸಬಹುದು ಶತ್ರುಗಳನ್ನು ಬಹು ದೂರದಿಂದಲೇ ಗುರುತು ಹಚ್ಚುವಷ್ಟು ಅದರ ದೃಷ್ಟಿ ಚುರುಕು. ಶತ್ರುಗಳ ಕೈಗೆ ಸಿಕ್ಕಿದರೆ ಪೂರ್ಣ ಸತ್ತು ಹೋದಂತೆಯೂ ನಟಿಸಬಲ್ಲುದು. ಹರಿತವಾದ ಉಗುರುಗಳಿಂದ ಮನುಷ್ಯರನ್ನು ಅದು ಕೊಲ್ಲುವುದುಂಟು,

ಒಂದು ತಂಡದಲ್ಲಿ ಹೆಚ್ಚಾಗಿ ನಾಲ್ಕು ಹೆಣ್ಣು ಹಕ್ಕಿಗಳೂ ಒಂದು ಗಂಡು ಹಕ್ಕಿಯೂ ಇರುತ್ತವೆ. ಇವು ಎಷ್ಟು ವರ್ಷ ಬದುಕುತ್ತವೆಂಬುದು ನಿಶ್ಚಿತವಾಗಿ ಗೊತ್ತಿಲ್ಲ. ಮೃಗಾಲಯಗಳಲ್ಲಿ ೪೦ ವರ್ಷ ಬದುಕಿದ ದಾಖಲೆಯಿದೆ. ಈ ಪಕ್ಷಿ ವಿಶ್ರಾಂತಿ ತೆಗೆದು ಕೊಳ್ಳುವಾಗ ತನ್ನ ನೀಳವಾದ ಕೊರಳನ್ನು ಭೂಮಿಯ ಮೇಲೆ ಚಾಚಿಕೊಳ್ಳುತ್ತದೆ. ಅದು ಭಯಗೊಂಡಾಗ ತಲೆಯನ್ನು ಮರಳಿನಲ್ಲಿ ಹುದುಗಿಸುತ್ತದೆ ಎಂದು ಹೇಳುತ್ತಾರೆ. ಈ ಮಾತು ನಿಜವಾದುದಲ್ಲ.

ಉಷ್ಟ್ರಪಕ್ಷಿ ಮಾಂಸಾಹಾರಿ ಅಲ್ಲ. ಹುಲ್ಲು ಅದರ ಆಹಾರ. ಆದರೆ ಸಿಕ್ಕಿದರೆ ಕಬ್ಬಿಣದ ಮೊಳೆ, ಸರಪಣಿ, ಕಲ್ಲು ಇತ್ಯಾದಿಗಳನ್ನೂ ನುಂಗುತ್ತದೆ ದೊಡ್ಡ ವಸ್ತುವನ್ನು ನುಂಗುವಾಗ ಆ ವಸ್ತುವಿಗೆ ತಕ್ಕಂತೆ ಅದರ ಗಂಟಲು ಹಿಗ್ಗಿ ಕೊಳ್ಳುವುದು. ಆದ್ದರಿಂದ ಸಣ್ಣ ಆಮೆಗಳನ್ನು ಅದು ನುಂಗುವುದುಂಟು.

ಹೆಣ್ಣು ಪಕ್ಷಿ ಮರಳಿನಲ್ಲಿ ಹೊಂಡಗಳನ್ನು ತೋಡಿ ಅದರಲ್ಲಿ ತತ್ತಿ ಯಿಡುತ್ತದೆ. ಅವು ಗೂಡು ಕಟ್ಟಿಕೊಳ್ಳುವುದಿಲ್ಲ. ಎಲ್ಲಾ ಹಕ್ಕಿಗಳಿಗಿಂತ ದೊಡ್ಡ ಗಾತ್ರದ ಮೊಟ್ಟೆ ಅವುಗಳದು ಹನ್ನೆರಡು ಅಡಿ ಅಗಲವಾದ ವೃತ್ತಾಕಾರದ ಹೊಂಡದಲ್ಲಿ ಒಂದು ಸಲಕ್ಕೆ ೧೫ ರಿಂದ ೨೦ ರಷ್ಟು ಇರಿಸುವ ಮೊಟ್ಟೆಗಳು ೮ ಅಂಗುಲ ಉದ್ದವಾಗಿಯೂ ೩ ಪೌಂಡ್ ಭಾರವು ಇರುತ್ತವೆ. ಒಂದು ಮೊಟ್ಟೆ ೨೦ ಕೋಳಿ ಮೊಟ್ಟೆಗಳಿಗೆ ಸಮಾನ. ಇದನ್ನು ಬೇಯಿಸಲು ೪೦ ನಿಮಿಷ ಬೇಕು. ಒಂದು ಮೊಟ್ಟೆ ೧೫ ಜನರಿಗೆ ಆಮ್ಲೆಟ್ ಮಾಡಲು ಸಾಕು ಒಂದು ಗೂಡಿನಲ್ಲೇ ಏಕಕಾಲಕ್ಕೆ ಅನೇಕ ಹೆಣ್ಣು ಹಕ್ಕಿಗಳು ಮೊಟ್ಟೆಯಿಡುವುದುಂಟು. ಮೊಟ್ಟೆಗಳಿಗೆ ಹಾಲು ಕೆನೆ ಬಣ್ಣ. ಆಗಸ್ಟ್‌ನಿಂದ ಡಿಶಂಬರ್ ವರೆಗೆ ಮೊಟ್ಟೆಯಿಡುವ ಕಾಲ.

ಹಗಲಿನಲ್ಲಿ ಹೆಣ್ಣು ಹಕ್ಕಿ, ರಾತ್ರಿ ಗಂಡು ಹಕ್ಕಿ ರಾತ್ರಿ ಕಾವು ಕೊಟ್ಟು ಮರಿ ಮಾಡುತ್ತವೆ. ೬ ವಾರದಲ್ಲಿ ಮರಿಯಾಗುತ್ತದೆ. ಮರಿ ದೊಡ್ಡದಾಗಲು ೪ ವರ್ಷ ಬೇಕು. ಮೊಟ್ಟೆಯೊಡೆದ ಮರಿ ೧ ಅಡಿ ಎತ್ತರವೂ ೨ ಪೌಂಡು ಭಾರವೂ ಇರುವುದು. ಹಳದಿ ಬಣ್ಣ, ಕರಿಯ ಪಟ್ಟೆಗಳು ಅದಕ್ಕಿರುತ್ತವೆ. ಅನಂತರ೫ ವರ್ಷ ಅದು ತಿಂಗಳಿಗೆ ಒಂದು ಅಂಗುಲದಂತೆ ಬೇಳೆಯುತ್ತಾ ಹೋಗುತ್ತದೆ. ಮರಿಗಳಿಗೆ ಕತ್ತೆ ಕಿರುಬ ಮತ್ತು ಸಿಂಹಗಳು ಶತ್ರುಗಳು. ತುಂಬ ಚುರುಕಾದ ಅವುಗಳನ್ನು ರಕ್ಷಿಸಲು ತಾಯಿ ಹಕ್ಕಿ ಸದಾಕಾಲ ಎಚ್ಚರದಿಂದಿರುತ್ತದೆ. ಅದು ಕಾಲೆತ್ತಿ ಒಂದು ಸಲ ಒಡೆಯಿತೆಂದರೆ ಬಡಿಗೆಯಿಂದ ಬಾರಿಸಿದ ಹಾಗಿರುತ್ತದೆ. ಮರಿಗಳು ಸಾಲಾಗಿ ಹೋಗುವುದನ್ನು ನೋಡಲು ತುಂಬ ಚಂದ. ಬಿಸಿಲಿನ ಕಾವು ಏರಿದಾಗಲೂ ಹೆದರಿಕೆಯಾದಾಗಲೂ ಮರಿಗಳು ತಾಯಿಯ ನೆರಳಿಗೆ ಓಡಿ ಬಂದು ಆಶ್ರಯ ಪಡೆಯುತ್ತವೆ. ಎರಡು ಗಂಡು ಉಷ್ಟ್ರಗಳು ಎದುರಾದರೆ ಅವುಗಳು ಹೋರಾಡಿ, ಯಾವುದಾದರೂ ಒಂದು ಗಂಡು ಸಾಯುವ ವರೆಗೂ ಬಿಡುವುದಿಲ್ಲ. ಅದರಿಂದಾಗಿ ಈ ಹಕ್ಕಿಗಳಲ್ಲಿ ಗಂಡು ಸಂತಾನ ಕಮ್ಮಿ ಯಾಗಿದೆ, ಮೊಟ್ಟೆಗೆ ಕಾವು ಕೊಡುವಾಗ ಹೆಣ್ಣು ಹಕ್ಕಿಗಳು ಒಂದಾದ ಮೇಲೆ ಒಂದರಂತೆ ಪೈಪೋಟಿ ನಡೆಸಿ ಕುಳಿತುಕೊಳ್ಳುತ್ತವೆ.

ಉಷ್ಟ್ರಪಕ್ಷಿಯ ತಲೆ ಮತ್ತು ಕತುಗಳಲ್ಲಿ ಬಿರುಗೂದಲುಗಳಿವೆ. ಇವುಗಳ ಬಿಳಿ ಗರಿಗಳು ಬೆಲೆ ಬಾಳುತ್ತವೆ. ಬಹು ಹಿಂದಿನಿಂದಲೇ ಈಜಿಪ್ಟ್, ಫ್ರಾನ್ಸ್,

ಅಮೇರಿಕಗಳ ಮಹಿಳೆಯರು ಟೊಪ್ಪಿಗೆಗಳ ಅಲಂಕಾರಕ್ಕೆ ಆದನ್ನು ಉಪಯೋಗಿಸುತ್ತಿದ್ದಾರೆ. ಈ ಗರಿಗಳನ್ನು ಕಿತ್ತು ತೆಗೆದರೆ ಅವುಗಳಿಗೆ ಏನೂ ಹಾನಿಯಿಲ್ಲ. ಮತ್ತೆ ಗರಿಗಳು ಹುಟ್ಟಿಕೊಳ್ಳುತ್ತವೆ. ಒಂಬತ್ತು ತಿಂಗಳಿಗೊಮ್ಮೆ ಗರಿ ತೆಗೆಯಬಹುದು. ಇವುಗಳ ಚರ್ಮದಿಂದ ಕೈ ಚೀಲ ಪಾದರಕ್ಷೆಗಳು ತಯಾರಾಗುತ್ತವೆ. ಮಾಂಸವೂ ತಿನ್ನಲು ಉಪಯುಕ್ತ. ಅದರಿಂದಾಗಿ ಅರೇಬಿಯ, ಸೂಡಾನ್, ನೈರುತ್ಯ ಏಷ್ಯದ ಹಲವು ಕಡೆ ಇದ್ದ ಅವುಗಳ ಸಂತತಿ ಪೂರ್ಣ ಮಾಯವಾಗಿದೆ. ಕೆನ್ಯಾದಲ್ಲಿ ಅದು ರಾಷ್ಟ್ರಪಕ್ಷಿ

ದಕ್ಷಿಣ ಆಫ್ರಿಕದ ಕೇಪ್ ಪ್ರಾವಿನ್ಸ್, ಅಲ್ಜೀರಿಯ, ಫ್ರೆಂಚ್ ರೈವೀರಾ, ದಕ್ಷಿಣ ಅಮೆರಿಕ, ಈಜಿಪ್ಟ್‌ಗಳಲ್ಲಿ ಉಷ್ಟ್ರಪಕ್ಷಿಗಳನ್ನು ಸಾಕುವಂಥ ಕ್ಷೇತ್ರಗಳಿವೆ. ಇಲ್ಲಿಂದ ವಿದೇಶಗಳಿಗೆ ಗರಿಗಳನ್ನು ರಫ್ತು ಮಾಡುತ್ತಾರೆ. ಐದು ಟನ್ ತೂಕದ ಗರಿಗೆ ಎರಡು ಲಕ್ಷ ಡಾಲರು ಬೆಲೆಯುದೆ. ಉಷ್ಟ್ರಪಕ್ಷಿಗಳನ್ನು ಪಳಗಿಸಬಹುದು. ಬಂಧನದಲ್ಲಿಯೂ ಅವು ಸಂತಾನ ಅಭಿವೃದ್ಧಿ ಮಾಡಿಕೊಳ್ಳುತ್ತವೆ.

# ಕಲ್ಯಾಣದಲ್ಲಿ ಅನುಭವ ಮಂಟಪ

ಬಿ.ಹೆಚ್. ದೇಸಾಯಿಸ್ವಾಮಿ ಹಳಿಯಾಳ (ಉ.ಕ)

ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ
ತೈಲವನೆರೆದು ಆಚಾರವೆಂಬ ಬತ್ತಿಗೆ ಬಸವಣ್ಣನೆಂಬ
ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗುತಿದ್ದಿತಯ್ಯ
ಶಿವನ ಪ್ರಕಾಶ ಆ ಬೆಳಗಿನೊಳೊಪ್ಪುತಿರ್ದರಯ್ಯಾ ಅಸಂಖ್ಯಾತ
ಭಕ್ತ ಮಹಾಗಣಂಗಳು ಇಂತಪ್ಪ ಶಿವ ಭಕ್ತರಿರ್ದ ತಾಣ
ಕ್ಷೇತ್ರವೆಂಬುದು ಹುಸಿಯೇ ಗುಹೇಶ್ವರಾ!

—ಪ್ರಭುದೇವರು

ಇಂಥ ಕಲ್ಯಾಣ ಪಟ್ಟಣದಲ್ಲಿ ನಿರ್ಮಿತವಾದ ಶಿವಾನುಭವ ಮಂಟಪದಲ್ಲಿ ಚರ್ಚಿಸಲ್ಪಟ್ಟ ವಚನಗಳ ಸಹಾಯದಿಂದ ಶಿವಶರಣರು ಸಮಾಜ ಸುಧಾರಣೆಯನ್ನು ಹೇಗೆ ಮಾಡಿದರೆಂಬುದನ್ನು ತಿಳಿಯುವಾ.,

ಶರಣರು ಸಮಾಜದಲ್ಲಿ ರೂಢವಾಗಿ ನೆಲಸಿದ್ದ ನೂರೆಂಟು ದೇವರಗಳ ತಪ್ಪು ಕಲ್ಪನೆಯನ್ನು ಹೋಗಲಾಡಿಸಿ ಒಬ್ಬದೇವನ ಅಸ್ತಿತ್ವವನ್ನು ಸಾರಿ ಜನತೆಗೆ ಆತನ ಆರಾಧನೆಯುನ್ನು ಸುಲಭಗೊಳಿಸುವದು.

ಸಮಾಜದಲ್ಲಿ ಬೇರೂರಿದ್ದ ನೊಸೆಂಟು ಕುಲಜಾತಿಗಳ ತಾಕಲಾಟವನ್ನು ತಗ್ಗಿಸಿ ಅವರೆಲ್ಲರೂ ಒಂದೇ ಧರ್ಮ ಕೈಕೊಳ್ಳಪಡುವಂತೆ ಜಾತ್ಯಾತೀತವಾದ ಸಮಾಜವನ್ನು ಕಟ್ಟಿದರು.

ಜನತೆಯಲ್ಲಿ ರೊಢವಾಗಿರುವ ಅಜ್ಞಾನ, ಮೂಡಭಾವನೆ, ಡಂಬಾಚಾರಗಳನ್ನು ಹೋಗಲಾಡಿಸಿ ಜನರ ಒಲವನ್ನು ಸದಾಚಾರ, ಸದ್ಭಕ್ತಿ, ತ್ಯಾಗ, ವಿನಯಾದಿ ಗುಣಗಳ ಕಡೆಗೆ ತಿರುಗಿಸಿದರು.

ಸ್ತ್ರೀಯರಿಗೆ ಪುರುಷರಂತೆ ಪ್ರಪಂಚದಲ್ಲಿ ಮತ್ತು ಪಾರಮಾರ್ಥದಲ್ಲಿ ಸಮಾನ ಸ್ಥಾನ ಹಾಗೂ ಅರ್ಹತೆಯನ್ನು ಪಡೆಯಲು ಸಮಾನಾಧಿಕಾರವಿರುತ್ತದೆಂಬುದನ್ನು ಬಳಕೆಯಲ್ಲಿ ತಂದು ಜಗತ್ತಿಗೆ ತೋರಿಸಿ ಕೊಟ್ಟರು.

ಅಸ್ಪೃಶ್ಯರಲ್ಲಿ ಸದಾಚಾರ ಸದ್ಭಕ್ತಿಗಳನ್ನು ಬೆಳೆಸಿ ಅವರ ಮಟ್ಟವನ್ನು ಎತ್ತರಿಸಿ ಅವರನ್ನು ಒಳ್ಳೆ ಶರಣಾಗುವಂತೆ ಮಾಡಿದರು. ಇಂಥ ಘನತರವಾದ ಪುಣ್ಯ ಕಾರ್ಯವನ್ನು ಯಾವ ಮಹಾತ್ಮನೂ ಯಾವ ಕಾಲಕ್ಕೂ ಮಾಡಿಲ್ಲ.

ಯಜ್ಞ ಯಾಗಾದಿಗಳಲ್ಲಿ ಬಲಿದಾನ ಯುದ್ಧಗಳಲ್ಲಿ ಆಗುವ ಪಶುವಧೆ ಪ್ರಾಣ ಹಿಂಸೆಯನ್ನು ಹೋಗಲಾಡಿಸಿ ದಯವಿಲ್ಲದ ಧರ್ಮಯಾವುದಯ್ಯಾ? ದಯವೇ ದರ್ಮದ ಮೂಲವಯ್ಯಾ-ದಯವೇ ಬೇಕು. ಸಕಲ ಪ್ರಾಣಿಗಳಲ್ಲಿ ದಯವಿಲ್ಲದವರನೊಲ್ಲನಯ್ಯಾ ಕೂಡಲ ಸಂಗಮದೇವಾ ಎಂದು ಸಾರಿ ಅಂಹಿಸೆಯ ಮೇಲ್ಮೆಯನ್ನು ತೋರಿಸಿಕೊಟ್ಟರು.

ಕಾಯಕ ದಾಸೋಹಗಳ ಮಹತ್ವವನ್ನು ಜನತೆಗೆ ತೋರಿಸಿಕೊಟ್ಟರು. ಅವರಲ್ಲಿ ಅರ್ಥಿಕ ಸಮಾನತೆಯನ್ನು ನೆಲೆಗೊಳಿಸಿದರು. ಸಮತೆಯ ಸಾಮ್ಯವಾದವನ್ನು ಪ್ರಚಾರಗೊಳಿಸಿದರು.

ದೈವ ಪಂಚಾಂಗಗಳನ್ನು ನಂಬಿ ಎದೆಗೆಡುವ ಜನರನ್ನು ಕುರಿತು ದೇವರಲ್ಲಿ ಶ್ರದ್ಧೆಯಿಟ್ಟು ನಡೆಯುವವರಿಗೆ ಯಾವ ಕಂಟಕಗಳಭಯವೂ ಇಲ್ಲೆಂದು ಸಾರಿ ಅವರಲ್ಲಿ ಅವರಲ್ಲಿ ಧೈರ್ಯವನ್ನುಂಟು ಮಾಡಿದರು.

ಇನ್ನು ಅಧ್ಯಾತ್ಮಿಕ ದೃಷ್ಟಿಯಿಂದ ಶರಣರು ಯಾವ ಕಾರ್ಯಗಳನ್ನು ಸಾಧಿಸಿಹರೆಂಬುದನ್ನು ವಿಚಾರಿಸೋಣ.

ಷಟ್‌ಸ್ಥಲಗಳನ್ನು ಒಂದು ಕ್ರಮಬದ್ಧವಾದರೀತಿಯಲ್ಲಿ ಮಾರ್ಪಡಿಸಿದರು.

ಸಾಧಕಾವಸ್ಥೆಯಲ್ಲಿ ಉಪಾಸನಾ ಮಾರ್ಗವು ಅತ್ಯಾವಶ್ಯಕವೆಂದು ಸಾರಿ ಅರುಹಿನ ಕುರುಹು ಹಿಡಿದು ಭಕ್ತಿಯನ್ನು ಆಚರಿಸುವಂತೆ ಮಾಡಿದರು. ಆದಾಗ್ಯೂ ಶಿವಾದ್ವೈತವೇ ಅಂತಿಮ ಗುರಿಯೆಂದು ಸಾಧಿಸಿದರು.

ಶಿವಾನುಭವ ಮಂಟಪದಲ್ಲಿ ಲೌಕಿಕ ಪಾರಮಾರ್ಥಿಕ ವಿಷಯಗಳನ್ನು ಹೊಂದಿಕೆಯಾಗುವಂತೆ ಚರ್ಚಿಸಿ ಆ ತತ್ವಗಳನ್ನು ಮೊದಲು ತಾವು ಆಚರಿಸಿ ತಮ್ಮ ಬಾಳನ್ನು ಹಸನ ಮಾಡಿಕೊಂಡು ತಮ್ಮ ಬಾಳು ಅನ್ಯರಿಗೆ ಕೈದೀಪವಾಗುವಂತೆ ಮಾಡಿದರು.

ಗುರುಲಿಂಗ ಜಂಗಮರು ಒಬ್ಬ ಪರವಸ್ತುವಿನ ಸ್ವರೂಪವೆಂದು ಅರಿದು ಬಹಿರಂಗದ ಆಚರಣೆಯಲ್ಲಿ ವ್ಯಕ್ತಪಡಿಸಿದರು.

ಜಗತ್ತು ಸಾಧಕನಿಗೆ ಸತ್ಯ ಮಿಥ್ಯವಲ ಎಂದು ಶಕ್ತಿ ವಿಶಿಷ್ಟಾದ್ವೈತವನ್ನು ಪ್ರಚಾರದಲ್ಲಿ ತಂದರು.

ಶರಣರು ಭಿನ್ನ ಭಿನ್ನ ಧರ್ಮಗಳನ್ನು ಮನ್ನಿಸದೆ ಮಾನವ ಧರ್ಮವೊಂದನ್ನೇ ದೃಡವಾಗಿ ನಂಬಿ ಅದರಲ್ಲಿ ಭಕ್ತಿ (ಸದ್ಗುಣಿ) ಭವಿ (ದುರ್ಗುಣಿ) ಎಂಬೆರಡೇ ವರ್ಗಗಳನ್ನಾಗಿ ವಿಂಗಡಿಸಿದರು.

ಕನ್ನಡ ನುಡಿಯನ್ನು ಅಪ್ರಾಕೃತ ದೇವ ವಾಣಿಯನ್ನಾಗಿ ಮಾಡಿದರು. ಕನ್ನಡ ವಚನಗಳನ್ನು ಅಮರವಾಗುವಂತೆ ರಚಿಸಿ ಅವು ವೇದೋಪನಿಷತ್ತುಗಳನ್ನು ಮೀರುವಂತೆ ಮಾಡಿದರು.

ಬಸವಣ್ಣನು ತಾನೊಬ್ಬನೇ ಶರಣನಾಗಿ ತನ್ನಷ್ಟಕ್ಕೆತಾನೆ ಮೋಕ್ಷಪಡೆಯದೆ ತನ್ನಂತೆ ಅಸಂಖ್ಯಾತ ಶರಣರನ್ನು ತನ್ನ ಜೀವಮಾನದಲ್ಲೇ ನಿರ್ಮಿಸಿ ಅವರಿಗೂ ಮೋಕ್ಷದ್ವಾರವನ್ನು ಮುಕ್ತ ಮಾಡಿದನು. ಅಂಥ ಪುಣ್ಯ ಪುರುಷನು ಜಗತ್ತಿನಲ್ಲಿ ಇವನೊಬ್ಬನಲ್ಲದೆ ಬೇರಿಲ್ಲ. ಲಕ್ಷಕ್ಕೊಬ್ಬ ಭಕ್ತ ಕೋಟಿಗೊಬ್ಬ ಶರಣ ಎಂದು ಲೋಕೋಕ್ತಿಯಿರುವಾಗ ಅಂಥ ಅನಂತ ಶರಣರನುಂಟು ಮಾಡಿದ ಶ್ರೇಯಸ್ಸು ಬಸವಣ್ಣನೊಬ್ಬನಿಗೆ ಸಲ್ಲುತ್ತಿದೆ.

ಶರಣರು ಬೇರೆ ಬೇರೆ ಲೋಕಗಳ ಮಿಥ್ಯಾ ಕಲ್ಪನೆಯನ್ನು ಕಿತ್ತುಹಾಕಿದರು. ದೇವಲೋಕ ಮರ್ತ್ಯಲೋಕವೆಂಬಿವು ಬೇರಿಲ್ಲ ಕಾಣಿರೋ ಸತ್ಯವ ನುಡಿವುದೇ ದೇವಲೋಕ ಮಿಥ್ಯವ ನುಡಿವುದೇ ಮರ್ತ್ಯಲೋಕ ಆಚಾರವೇ ಸ್ವರ್ಗ, ಅನಾಚಾರವೇ ನರಕ ಇದಕ್ಕೆ ನೀನೇ ಪ್ರಮಾಣು ಕೂಡಲ ಸಂಗಮದೇವಾ ಎಂಬೀ ವಿಚಾರಾರ್ಹವಾದ ತತ್ವವನ್ನು ನೆಲೆಗೊಳಿಸಿದರು. ಕೈಲಾಸವೆಂಬುದು ಬೇರಿಲ್ಲ ಕಾಯಕವೇ ಕೈಲಾಸ ವೆಂದರು ಶರಣರಿರ್ದ ತಾಣವೇ ಅವಿಮುಕ್ತ ಕ್ಷೇತ್ರವೆಂದರು. ಈ ರೀತಿಯಾಗಿ ಶರಣರು ಬೇರೆ ಬೇರೆ ಲೋಕಗಳಿರುತ್ತವೆಂಬ ಭ್ರಾಮಕ ಕಲ್ಪನೆಗಳನ್ನೆಲ್ಲ ಕಿತ್ತು ಹಾಕಿದರು,

ಕೇವಲ ಸನ್ಯಾದಿಂದಲೇ ಮೋಕ್ಷಪ್ರಾಪ್ತಿಯೆಂಬ ಆಗಿನಕಾಲಕ್ಕೆ ಪ್ರಚಲಿತ-ವಾಗಿದ್ದ ವಿಚಾರವನ್ನು ಅಲ್ಲಗಳೆದು ಪ್ರಾಪಂಚಿಕರು ಕೂಡ ಭಕ್ತಿಯೋಗ, ಕರ್ಮ ಯೋಗಗಳಿಂದ ಮೋಕ್ಷವನ್ನು ಸುಲಭವಾಗಿ ಸಾಧಿಸುವ ಹಾದಿಯನ್ನು ತೋರಿಸಿ ಕೊಟ್ಟರು. ಅತಿ ಕೀಳುಕುಲದ ಅಸ್ಪೃಶ್ಯರಿಗೂ ಕೂಡ ಮೋಕ್ಷ ಸಾಧನೆಯ ಮಾರ್ಗ ವನ್ನು ತೋರಿಸಿಕೊಟ್ಟ ಶ್ರೇಯಸ್ಸು ಶರಣರಿಗೇನೇ ಸಲ್ಲುತ್ತದೆ.

ಶರಣರು ಗೊಳ್ಳು ವೇದಾಂತಿಗಳಲ್ಲ ಮುಳ್ಳು ಸಿದ್ಧಾಂತಿಗಳಲ್ಲ. ಸಾಕಾರದ ಕುರುಹಿಡದೇ ನಿರಾಕಾರ ಪರಬ್ರಹ್ಮದಲ್ಲಿ ಐಕತ್ಯೆಯನ್ನು ಪಡೆದರು. ಅರುಹು ಬರ-ಲೆಂದು ಕುರುಹು ಕೊಟ್ಟರೆ ಆ ಅರುಹನ್ನೇ ಮರೆದು ಕುರುಹನ್ನೇ ಪೂಜಿಸುವ ಮರಳರನ್ನು ನೋಡಾ ಗುಹೇಶ್ವರಾ ಎಂದು ಪ್ರಭುದೇವರು ಅಪ್ಪಣೆ ಕೊಡಿಸಿದ್ದಾರೆ. ಅಂದರೆ ಜ್ಞಾನವಿಲ್ಲದ ಯಾಂತ್ರಿಕ ಭಕ್ತಿಯನ್ನು ಜರಿದಿದ್ದಾರೆ.

**ಕೃಪೆ:– ಶರಣ ಧರ್ಮ**

# ವ್ಯಕ್ತಿ ಮತ್ತು ಸಾಹಿತ್ಯ

ಎಸ್. ಖಂಡೋಜಿರಾವ್. ತುಮಕೂರು.

ಮನುಷ್ಯನಿಂದ ಅಭಿವ್ಯಕ್ತವಾಗುವ ಭಾವನೆಗಳ ಸರಮಾಲೆಯೇ ಸಾಹಿತ್ಯ ಎನ್ನಬಹುದು. ಈ ಭಾವನೆಗಳು ಸ್ವಂತ ಅನುಭವದಿಂದಾಗಿ, ಚಿಂತನೆಗಳ ಮೂಲಕ, ಪರರ ಸ್ಥಿತಿಗಳ ಮೇಲೆ ಅವಲೋಕನ ನಡೆಸಿದಾಗ, ಸಮಾಜ–ರಾಷ್ಟ್ರ, ಪ್ರಪಂಚ ಮತ್ತು ಪ್ರಕೃತಿಯ ಬಗೆಗಿನ ಚಿಂತನೆಗಳು, ಮತ್ತು ಸುಪ್ತ ಮನಸ್ಸಿನ ಭಾವನೆಗಳು ಮಸಿಯ ರೂಪದಲ್ಲಿ ರೂಪು ತಾಳುತ್ತವೆ. ಅದು ಬಂಡಾಯವಾಗಿರಬಹುದು. ಕರುಣಾಸೂಚಕವಾಗಿರಬಹುದು, ವಿಕೃತವಾಗಿರಬಹುದು, ಹೀಗೆ ಯಾವುದೇ ಪ್ರಕಾರದ ಸಾಹಿತ್ಯವಾಗಿರಬಹುದು. 'ಮನುಷ್ಯ ಮತ್ತು ಸಾಹಿತ್ಯ' ಎಂಬ ವಿಷಯವನ್ನು ತೆಗೆದುಕೊಂಡಾಗ ಸಾಹಿತ್ಯವು ಮನುಷ್ಯನ ಹೃದಯವನನ್ನು ಸ್ಪಂದಿಸುವುದು ನಾವು ಕಾಣುತ್ತೇವೆ. ಸಾಹಿತ್ಯವು ಮನುಷ್ಯನಿಗೆ ಮಾರ್ಗದರ್ಶಿಯಾಗಿ ಸೌಂದರ್ಯಾನುಭವವನ್ನು ಕಲ್ಪಿಸುತ್ತದೆ ಆದರೆ ಮಾನವ ಅದರ ಸೃಷ್ಟಿಕರ್ತ ಮತ್ತು ಪೋಷಕ. ಅದನ್ನು ಪೋಷಿಸಿ ಹೆಮ್ಮರವಾಗಿಸುವ ಕಾರ್ಯ ಅವನ ಕೈಯ್ಯಲಿದೆ.

ಮೊದಲೇ ಹೇಳಿದಂತೆ ಸಾಹಿತ್ಯ ಯಾವುದೇ ವಿಭಾಗಕ್ಕೆ ಸೇರಿದ್ದಾಗಿರಬಹುದು. ಅಂದರೆ, ವಿಜ್ಞಾನ ಸಾಹಿತ್ಯವಾಗಬಹುದು, ಮನಶಾಸ್ತ್ರ ಸಾಹಿತ್ಯವಾಗಬಹುದು ಕಾಮಶಾಸ್ತ್ರ, ಸಾಹಿತ್ಯವಾಗಬಹುದು. ಕಾಮ ಶಾಸ್ತ್ರವನ್ನು ಸಾಹಿತ್ಯರೂಪದಲ್ಲಿ ತರುವುದರಲ್ಲಿ ತಪ್ಪೇನೂ ಇಲ್ಲ. ಸಾಹಿತ್ಯದ ಸೃಷ್ಟಿ ಕೆಲವು ಬಾರಿ ಕೆಲವರಿಂದ ಅವರವರವರ ಅಭಿರುಚಿಗೆ ತಕ್ಕಂತೆ ಆಗುತ್ತದೆ. ಕೆಲವೊಮ್ಮೆ ಸಮಾಜಕ್ಕೆ ಅಗತ್ಯವಿದೆ ಎಂಬ ದೃಷ್ಟಿಯಿಂದಲೂ ಆಗಬಹುದು. ಕೆಲವರ ಒತ್ತಡಗಳಿಂದಲೂ ಸಾಹಿತ್ಯ ಸೃಷ್ಟಿಆಗಬಹುದು. ಹೇಗೆಂದರೆ ಪ್ರಾಚೀನ ಕಾಲದಲ್ಲಿ ಭಾರತದ ರಾಜರುಗಳು ಆಸ್ಥಾನ ಬರಹಗಾರರು ಕಾಮಶಾಸ್ತ್ರವನ್ನು ಬಲ್ಲವರಾಗಿರಬೇಕು ಎಂಬ ನಿಬಂಧನೆಯನ್ನು ವಿಧಿಸಿದ್ದರು. ವೈಜ್ಞಾನಿಕವಾಗಿ ವಿಶ್ಲೇಷಿಸಿದಾಗ ಕಾಮಶಾಸ್ತ್ರದ ಬಗ್ಗೆ ತರ್ಕಿಸುವುದು, ಬರೆಯುವುದು ಅಪರಾಧವೇನಲ್ಲ. ಸುಮಾರು ಏಳನೇ ಶತಮಾನದಲ್ಲಿ ವಾಸವಾಗಿದ್ದನೆಂದು ಊಹಿಸಲಾಗಿರುವ ವಾತ್ಸ್ಯಾಯನನು ಪ್ರಥಮ ಬಾರಿಗೆ ಕಾಮಶಸ್ತ್ರದ ಬಗ್ಗೆ ವಸ್ತುನಿಷ್ಠವಾಗಿ ಬರೆದು ಜಗತ್ಪ್ರಸಿದ್ಧಿಯಾದನು ಅಂದರೆ ಯಾವರೀತಿಯ ಸಾಹಿತ್ಯವೇ ಆಗಲಿ, ಅದರ ಕ್ಷೇತ್ರ ಯಾವುದೇ ಆಗಿರಲಿ, ಸಂಪೂರ್ಣ ಅರಿವು ಮೂಡಿಸುವಂತ, ಸಲಹೆಗಳನ್ನು ಪ್ರತಿಪಾದಿಸುವಂತ ಸೃಜನಶೀಲ ಸಾಹಿತ್ಯ ಮೂಡಬೇಕಾಗುತ್ತದೆ. ಆದುದರಿಂದ ಸಾಹಿತಿ ಆರಿಸಿಕೊಂಡಿರುವ ಕ್ಷೇತ್ರಕ್ಕಿಂತ ಅವನು ಹೊರಹೊಮ್ಮಿಸುವ ಸಾಹಿತ್ಯ ಹೆಚ್ಚಿನ ಜವಾಬ್ದಾರಿಯನ್ನು ಹೊಂದಿರುತ್ತದೆ.

ಕಲೆಗೂ ಸಾಹಿತ್ಯಕ್ಕೂ ನಿಕಟವಾದ ಸಂಬಂಧ ಹಲವಾರು ಕಡೆ ಕಲಾಕಾರನಿಗೆ ಸಾಹಿತ್ಯದ ಕೊರತೆ ಇದ್ದರೆ ಅವನ ಅಭಿವೃದ್ಧಿ ಕುಂಠಿತವಾಗಲು ಸಾಧ್ಯತೆಗಳಿವೆ. ಕಲಾಕಾರನು, ಒಂದು ಚಿತ್ರವನ್ನು ಚಿತ್ರಿಸ ಬೇಕಾದರೆ ಅವನ ಮನಸ್ಸಿನಲ್ಲಿ ಆದರ ಬಗ್ಗೆ ಸ್ಪಷ್ಟ ಕಲ್ಪನೆ ಮೂಡಬೇಕಷ್ಟೆ, ಆ ಕಲ್ಪನೆಯೇ ಬರಹ ರೂಪದಲ್ಲಿ ಹೊರ ಹೊಮ್ಮಿ ದ್ದರೆ ಸಾಹಿತ್ಯವಾಗುತ್ತಿತ್ತು. ಆದರೆ ಅವನಿಂದ ಚಿತ್ರಿಸಲ್ಪಟ್ಟ ಚಿತ್ರ ಬರಹ ರೂಪದಲ್ಲಿ ಬರಬೇಕಿದ್ದ ಸಾಹಿತ್ಯವನ್ನು ಹಿಡಿದಿಟ್ಟು ಕೊಂಡಿರುತ್ತದೆ ಕೆಲ ಕಲಾಕಾರರು ತಾವು ಓದಿದ ಸಾಹಿತ್ಯವನ್ನೇ ಚಿತ್ರದ ರೂಪದಲ್ಲಿ ಹೊರ ಹೊಮ್ಮಿಸಬಹುದು. ಇಲ್ಲಿ ಸಾಹಿತ್ಯವೇ ಕಲೆಯಾಗಿ ಪರಿವರ್ತನೆಗೊಳ್ಳುತ್ತದೆ. ಅಂದರೆ ಕಲೆಯೂ ಸಾಹಿತ್ಯ ಒಂದು ಭಾಗ ವೆಂದು ಸ್ಪಷ್ಟವಾಯಿತು. ವ್ಯಂಗ್ಯ ಚಿತ್ರ ಕಾರನಿಗಂತೂ ಸಾಹಿತ್ಯದ ಅಗತ್ಯತೆ ಹೆಚ್ಚು. ವ್ಯಂಗ್ಯ ಚಿತ್ರ ಒಂದು ವಾಕ್ಯ ಸಾಹಿತ್ಯದ ಮೂಲಕ ವಿಜೃಂಭಿಸಿ, ಮತ್ತಷ್ಟು ಮೆರುಗು ಪಡೆದು ಮನುಷ್ಯನನ್ನು ನಗೆಯ ಹೊನಲಲ್ಲಿ ಕೊಂಡೊಯ್ಯುತ್ತದೆ. ಹೀಗೆ ಸಾಹಿತ್ಯ ಮತ್ತು ಕಲೆಯ ನಡುವೆ ನಿಕಟ ಸಂಬಧವಿದ್ದು ಮನುಷ್ಯನ ಮೇಲೆ ಪ್ರಬಲಪರಿಣಾಮ ಬೀರುವುದು ಗಮನಾರ್ಹ. ಆದ್ದರಿಂದ, ಸಾಹಿತ್ಯ ಕ್ಷೇತ್ರ ಸಾಗರವಿದ್ದಂತೆ ಮನುಷ್ಯ ಅದನ್ನು ಈಜುವುದು ಕೆಲವೇ ಮೈಲಿಗಳು ಅದರಲ್ಲಿ ಹೆಚ್ಚು ಹೆಚ್ಚು. ಈಜಿದಷ್ಟೂ ಮನಸ್ಸಿನ ಕ್ಲೇಶಗಳು ದೂರ, ದೂರ ಸರಿಯುವುದರಲ್ಲಿ ಸಂಶಯವಿಲ್ಲ.

ಸಮಾಜವು ಗಾಡಿ ಚಕ್ರವಿದ್ದಂತೆ ಅದು ಪ್ರತಿದಿನಕ್ಕೂ, ಪ್ರತಿ ಕ್ಷಣಕ್ಕೂ ಬದಲಾ ವಣೆಯಾಗುತ್ತಿರುತ್ತದೆ. ಅದು ಬೇರೆ ಬೇರೆ ರೀತಿಯ ಬೇಡಿಕೆಗಳಿಸಬಹುದು. ಸಮಾಜದ ಆಶೋತ್ತರಗಳು ಪ್ರಕೃತಿಗೆ ವಿರುದ್ಧ ವಾಗಿರಲೂ ಬಹುದು. ಇಂತಹ ಸಂದರ್ಭಗಳಲ್ಲಿಯೇ ಪ್ರಕೃತಿ ವಿಕೋಪಗಳಾಗಲು ಸಾಧ್ಯ. ಏಕೆಂದರೆ ಪ್ರಕೃತಿಯಲ್ಲಿ ಅನೇಕ ವಿಧದ ವಿಕಾಸ ಗಳಾದರೂ ಅವು ಗಮನಕ್ಕೆ ಬರುವುದಿಲ್ಲ ಈ "ವಿಕಾಸ" ಎಂಬ ಅಂಶವನ್ನು ಬಿಟ್ಟು ಯೋಚಿಸಿದರೆ ಪ್ರಕೃತಿ ಸದಾ ವೇಳೆಯಲ್ಲಿ ತನ್ನ ಮೂಲತನವನ್ನು ಕಾಪಾಡಿಕೊಂಡೇ ಬರುತ್ತದೆ. ಪ್ರತಿಯೊಬ್ಬರಿಗೂ ಆಶ್ರಯ ಕಲ್ಪಿಸಿರುವ ಅದು ಸಮಾಜ ಆಸೆಗಳಿಗೆ ತಕ್ಕಂತೆ ಕುಣಿಯಲು ಸಾಧ್ಯವಿಲ್ಲ. ಹೀಗಾಗಿ ಸಮಾಜವು ಪ್ರಕೃತಿಯ ವಿರುದ್ಧ ದಿಕ್ಕಿನಲ್ಲಿ ನಡೆಯುವಾಗ, ನಿಜವಾದ ಚಿಂತನಶೀಲ, ಸೃಜನಶೀಲ, ಕಾರ್ಯ ಪ್ರವೃತ್ತ ಸಾಹಿತಿ ಕಷ್ಟಕ್ಕೆ ಸಿಕ್ಕಿಕೊಳ್ಳುತ್ತಾನೆ. ಅವನ ಸಾಹಿತ್ಯವು ಸಮಾಜದ ಓಟನೋಟವನ್ನು ತಿದ್ದುವಂತೆ ಮಾಡಬೇಕಾಗುತ್ತದೆ. "ಪ್ರತಿಯೊಂದು ವೇಳೆಯ ಲ್ಲಿಯೂ, ಸಮಾಜದ ಆಗುಹೋಗುಗಳನ್ನು ಗಮನದಲ್ಲಿಟ್ಟುಕೊಂಡು, ಪ್ರಕೃತಿಗೆ ಸ್ಪಂದಿಸುವ ಸಾಹಿತ್ಯ ಮೂಡಬೇಕಾಗುತ್ತದೆ." ಈ ರೀತಿಯಲ್ಲಿ ಸಮಾಜದ ಓ ಕೋರಿಗೆಗಳನ್ನು ತಿದ್ದಲು ಸಾಹಿತ್ಯ ಮುಂದಾಗಬೇಕಾಗುತ್ತದೆ. ಅಂದರೆ, ಮನುಷ್ಯನ ಮನಸ್ಸಿನ ಮೇಲೆ ಒಳ್ಳೆಯ ಪ್ರಭಾವ ಬೀರುವಂತ ಸಾಹಿತ್ಯ ಅದಾಗಿರಬೇಕಾಗುತ್ತದೆ ಹಣವನ್ನು ಗಮನದಲ್ಲಿಟ್ಟುಕೊಂಡು, ಸಮಾಜದ ಆಸೆಗಳ ರೀತಿಯಲ್ಲೇ ಸಾಹಿತ್ಯ

ಮೂಡಿದರೆ ಅದು ನಿಜವಾದ ಸಾಹಿತ್ಯವಾಗುವುದಿಲ್ಲ. ಹೊರನೋಟಕ್ಕೆ ಸಾಹಿತ್ಯ ದಂತೆ ತೋರಿವರೂ, ಒಳಹೊಕ್ಕಿದಾಗ "ಹಣ ಮಾಧ್ಯಮ' ಎಂದು ತಿಳಿದು ಬರುತ್ತದೆ.

ಸಾಹಿತ್ಯ ಸಮಾಜಕ್ಕಷ್ಟೇ ಸೀಮಿತಗೊಳ್ಳದೆ ರಾಷ್ಟ್ರ ಮತ್ತು ವಿಶ್ವವನ್ನೂ ಹತ್ತಿರದಿಂದ ನೋಡಬೇಕಾಗುತ್ತದೆ. ಮನುಷ್ಯನನ್ನು ಸಮಾಜದಲ್ಲಿ ಮಾತ್ರ ಸಜ್ಜನ-ನನ್ನಾಗಿ ಮಾಡಿದರೆ ಸಾಲದು. ಅವನಲ್ಲಿ ರಾಷ್ಟ್ರ ಪ್ರಜ್ಞೆಗಿಂತ ಹೆಚ್ಚಾಗಿ ವಿಶ್ವ-ಪ್ರಜ್ಞೆ ಮೂಡಿಸಬೇಕಾಗುತ್ತದೆ. ಸಾಹಿತ್ಯ ಪ್ರತಿಯೊಬ್ಬ ಮಾನವನನ್ನು ವಿಶ್ವ-ಮಾನವನನ್ನಾಗಿ ಬೆಳೆಸುವ ಜವಾಬ್ದಾರಿ ಹೊಂದಿರಬೇಕಾಗುತ್ತದೆ.

ಸಾಹಿತ್ಯ ಯಾವ ಭಾಷೆಯದಾಗಿರಲಿ ಯಾವ ರಾಷ್ಟ್ರದ್ದಾಗಿರಲಿ, ಯಾವ ವಿಷಯ ಕುರಿತದ್ದಾಗಿರಲಿ, ಅದು ಮನುಕುಲಕ್ಕೆ, ಶಾಂತಿ, ವಿಷಯ ಚಿಂತನೆ, ಮೂಲವಸ್ತುವಿನ ಖಚಿತ ನಿಲುವನ್ನು ಹೊಂದಿದ್ದರೆ ಸರಿ. ಮೂಲವಸ್ತು ಎಂದರೆ ಯಾವುದಾದರೂ ಆಗಬಹುದು. ಸಾಹಿತ್ಯದಲ್ಲಿ ಲೇಖಕರು, ಕವಿಗಳು, ಮತ್ತಿತರು ಮೂಲವಸ್ತುವಿನ ಬಗ್ಗೆ ಉತ್ಪ್ರೇಕ್ಷೆಗಳನ್ನು ಅಳವಡಿಸುವುದು ಸಹಜ. ಈ ಉತ್ಪ್ರೇಕ್ಷೆಗಳು ಮೂಲವಸ್ತುವಿನ ನೈಜ ವಿಷಯಕ್ಕೆ ಹತ್ತಿರವಾಗಿರಬೇಕು ಹಾಗೂ ಅದರ ಮೂಲ ವಿಷಯವನ್ನು ಸ್ಪಷ್ಟವಾಗಿ ತಿಳಿಸುವಂತಿರ ಬೇಕಾಗುತ್ತದೆ. ಸಾಹಿತ್ಯದಲ್ಲಿ ಉತ್ಪ್ರೇಕ್ಷೆಗಳ ಅವಶ್ಯಕತೆ ಇದೆ ನಿಜ. ಆ ಉತ್ಪ್ರೇಕ್ಷೆಗಳು ಪ್ರಸ್ತುತ ಕಾಲಕ್ಕೆ, ಸಮಾಜಕ್ಕೆ ಮತ್ತು ಪ್ರಕೃತಿಗೆ ಸಂಬಂಧಿಸಿರ ಬೇಕಾಗುತ್ತದೆ. ಮೊದಲೇ ಹೇಳಿರುವಂತೆ ಸಾಹಿತ್ಯ ಕ್ಷೇತ್ರ ಸಾಗರ. ಈ ಸಾಹಿತ್ಯ ಸಾಗರಕ್ಕೆ ಕೊಳಚೆ ವಸ್ತುಗಳ ಮಿಲನ ನಡೆಯುತ್ತಿ-ರುತ್ತದೆ. ಅದನ್ನು ತಡೆಯುವ ಶಕ್ತಿ ಪ್ರತಿಯೊಬ್ಬರಲ್ಲಿಯೂ ಮೂಡಬೇಕಾಗುತ್ತದೆ ಈ ಸಾಗರದಲ್ಲಿನ ನೀರು ಪವಿತ್ರವಾಗಿರ ಬೇಕು. ಅಪವಿತ್ರ ನೀರು ಮನುಷ್ಯನನ್ನು ಹುಡುಕಿಕೊಂಡು ಬರುವಂತಾಗಬಾರದು. ಮನುಷ್ಯನೇ ಅದರ ಅನ್ವೇಷಣೆ ಮಾಡಿ ಪವಿತ್ರ ನೀರನ್ನು ಕ್ರಮವಾಗಿ ಬಳಸ ಬೇಕಾಗುತ್ತದೆ. ಆಗ ಮಾತ್ರ ಮನುಷ್ಯ ಮತ್ತು ಸಾಹಿತ್ಯದ ನಡುವೆ ವ್ಯವಸ್ಥಿತ ಸಂಬಂಧ ಬೆಳೆಯಲು ಸಾಧ್ಯ.

ಆಧುನಿಕಯುಗವು ವಿಜ್ಞಾನ ಅಸ್ತಿಭಾರದ ಮೇಲೆ ನಿಂತಿದೆ. ಆದರೆ ಸಾಹಿತ್ಯ ವಿಲ್ಲದೇ ಇದ್ದರೆ ವಿಜ್ಞಾನದ ಅಳಿವು ಆಗುವುದರಲ್ಲಿ ಸಂಶಯವೇ ಇಲ್ಲ. ಏಕೆಂದರೆ, ಪ್ರಾಚೀನ ಕಾಲದಿಂದಲೂ ಬೆಳೆದು ಬಂದ ವೈಜ್ಞಾನಿಕ ಪ್ರಜ್ಞೆಯನ್ನು ಪೂರ್ವಜರು ಬರಹ ರೂಪದಲ್ಲಿ ಬರೆದು ಹೋದರು ಅದು ವಿಜ್ಞಾನ ಸಾಹಿತ್ಯ ಬೆಳೆದುದರ ಫಲವಾಗಿ ಮುಂದಿನ ತಲೆದೂಂಗೆ ಅನುಕೂಲವಾಯಿತು. ಹೀಗೆ ವಿಷಯಗಳ ಮುಂದುವರಿಕೆಗೆ ಸಾಹಿತ್ಯ ಪ್ರಮುಖ ಪಾತ್ರವಹಿಸುತ್ತದೆ.

ಸಾಹಿತ್ಯವು ವೈಜ್ಞಾನಿಕ ವಿಷಯವಾಗಿ ಸೃಷ್ಟಿಯಾಗಿದ್ದರೆ, ವೈಜ್ಞಾನಿಕ ಸಂಪತ್ತು ಮನುಷ್ಯನಲ್ಲಿ ಬೆಳೆಯಲು ಸಾಧ್ಯವಾಗುತ್ತದೆ. ಇಂದು ಅತಿ ಪ್ರಬಲ ಪಾತ್ರ ವಹಿಸುತ್ತಿರುವುದು ತತ್ವಶಾಸ್ತ್ರ ಪ್ರಕಾರದ ಸಾಹಿತ್ಯ ಎನ್ನಬಹುದು. ಅಂದರೆ ಅದು ಕತೆಗಳಾಗಿರಬಹುದು, ಕಾದಂಬರಿಗಳಾಗಿರಬಹುದು, ಕವನಗಳಾಗಿರಬಹುದು, ಮೇಲಾಗಿ ತತ್ವಶಾಸ್ತ್ರವೇ ಆಗಿರಬಹುದು. ಜನರ ಒಲವೂ ಈ ಕಡೆ ಇರುವುದು ಕಂಡುಬರುತ್ತಿದೆ. ಆದ್ದರಿಂದ ಸಾಹಿತಿಗಳು ಈ ಕ್ಷೇತ್ರದಲ್ಲಿ ಗಮನಾರ್ಹ ಪಾತ್ರವಹಿಸಬೇಕಾಗುತ್ತದೆ. ಪೊಳ್ಳು ವಿಷಯಗಳಿಗೆ ಬೆಲೆಕೊಟ್ಟು ಮೂಢನಂಬಿಕೆಗಳಿಗೆ ಪ್ರೋಷಿಸುವಂತ ಸಾಹಿತ್ಯ ಸೃಷ್ಠಿಸಿದರೆ ಅದು ಮಹಾಪರಾಧವೇ ಸರಿ

ಹೀಗೆ, ಸಾಹಿತ್ಯವು ವಿಚಾರ ಮಂಥನ, ಅನುಭವಗಳ ಅಭಿವ್ಯಕ್ತಿ. ಸಾಹಿತ್ಯವು ಭಾವನೆಗಳ ಸಂಗ್ರಹವಾಗದೆ, ವಿಕೃತ ರೂಪಗಳ ಕಾರಣವಾಗದಂತೆ ನಡೆಯುಬೇಕು. ಈ ಒಂದು ದಿಶೆಯಲ್ಲಿ ಶಾಂತಿ, ವಿಶ್ವಮಾನವ ಪ್ರಜ್ಞೆ ಮೂಡಿಸಲು ಸಾಧ್ಯವಾಗುತ್ತದೆ. ಆಗ ಮಾತ್ರ ಸಾಹಿತ್ಯ ಕ್ಷೇತ್ರ ಸೃಜನಶೀಲ, ವ್ಯಕ್ತಿತ್ವ ರೂಪಿಸುವಂಥ, ಶಾಂತಿ ಸಾಗರವಾಗಿ ಪರಿಣಮಿಸುತ್ತದೆ.

# ಋತುಧರ್ಮ

ಭಗಿನಿ ,

ಎನ್. ಎಸ್. ಅಶ್ವತ್ಥಲಕ್ಷ್ಮಮ್ಮ, ಎ. ಗುಬ್ಬಿ

ಮಧುಮಾಸ ಬಂದಿತು
ತಳಿರ ತೋರಣ ಕಟ್ಟಿತು
ಚೆಲುವ ಹಬ್ಬವೆಂದಿತು
ಕಣ್ಣಿಗೆ ಹಬ್ಬ ತಂದಿತು ||ಮಧು||

ಹಳೆಯುಡಿಗೆ ಕಳಚಿ
ಪೊಸವುಡಿಗೆ ಧರಿಸಿತು
ನವಚೇತನ ಚಿಮ್ಮಿತು
ಸಡಗರವ ತೋರಿತು ||ಮಧು||

ಭೂಮಿದೇವಿ ಉಟ್ಟಳು
ಪಚ್ಚೆ ಪೀತಾಂಬರ
ಬಣ್ಣ ಬಣ್ಣ ಬಟ್ಟೆನ
ಕಣ್ಣಿಗೇ ರಸಾಂಬರ || ಮಧು ||

ಋತುರಾಜನ ಕರೆದಿತು
ಪ್ರಕೃತಿ ಸ್ವಾಗತವೆಸಗಿತು
ಮಂದ ಮಾರುತ ಬೀಸಿತು
ಪುಷ್ಪಗುಚ್ಛ ಪಿಟ್ಟಿತು || ಮಧು ||

ಗಾಯನರಾಜ ಬಂದನು
ಮಾಮರದಿ ಕುಳಿತನು
ಗೀತಮಳೆಯ ಕರೆದನು
'ಕುಹೂ ಕುಹೂ ಎಂದನು ||ಮಧು||

ಚಿಲಿಪಿಲಿಯ ವೇದಘೋಷ
ಕಲ ಕಲ ಮಂಜುಲ ಘೋಷ
ಗಿಡಲತೆಯ ನಾಟ್ಯವೇಷ
ನವೋನ್ಮೇಷ ತಾಳಿತು || ಮಧು ||

ಯುಗಾದಿಯ ಮೌಲ್ಯತೆಯ
ಸುಖದುಃಖದ ಸಮಾನತೆಯ
ಜೀವ ಜೀವವೆತ್ತಿ ತೋರಿ
ಋತು ಧರ್ಮವ ಸಾರಿತು || ಮಧು ||

---

# ವಿಶೇಷ ಲೇಖನ:- ಶ್ರವಣ ಸಮಸ್ಯೆಯೇ? ಹೆದರಬೇಡಿ

-ಶ್ರೀ ಕೃಷ್ಣಾನಂದ ಹೆಗ್ಡೆ ವಾರ್ತಾಶಾಖೆ, ಭಾರತ ಸರ್ಕಾರ, ಬೆಂಗಳೂರು.

ಶ್ರವಣ ಶಕ್ತಿ ಕಳೆದುಕೊಂಡ ಅಂಗವಿಕಲರ ಜೀವನ ಸಮಾಜದಲ್ಲಿ ಬಹು ಕಷ್ಟ ಅವರನ್ನು ಅಪಹಾಸ್ಯ ಮಾಡುವುದೇ ಜಾಸ್ತಿ. ಸಮಾಜದಲ್ಲಿ ಅವರನ್ನು ಮನರಂಜನೆಯ ವಸ್ತುವನ್ನಾಗಿ ಕಾಣಲಾಗುತ್ತದೆ. ಆದರೆ ಕಿವಿ ಕೇಳಿಸದ ಅಂಗವಿಕಲರು ಇತರ ವಿಷಯಗಳಲ್ಲಿ ಜನ ಸಾಮಾನ್ಯರಷ್ಟೇ ಬುದ್ಧಿವಂತರಾಗಿರುತ್ತಾರೆ. ಆದರೆ, ಮುಖ್ಯವಾಗಿ ಅವರಿಗೆ ಸಮಾಜದಲ್ಲಿ ಸಹಾಯ ಮಾಡುವವರು, ಉತ್ತೇಜಿಸುವವರು ಬೇಕಾಗಿದ್ದಾರೆ.

ಮುಂಬೈಯಲ್ಲಿ 1983 ರಲ್ಲಿ ಅಲಿ ಯಾವರ್ ಜಂಗ್ ರಾಷ್ಟ್ರೀಯ ಸಂಸ್ಥೆಯೊಂದು ಶ್ರವಣ ಶಕ್ತಿ ಕಳೆದುಕೊಂಡ ಅಂಗವಿಕಲರ ಅಭಿವೃದ್ಧಿಯ ಉದ್ದೇಶದಿಂದ ಸ್ಥಾಪಿಸಲ್ಪಟ್ಟಿತ್ತು. ಚಿಕಿತ್ಸಾಲಯವಾಗಿ ಆರಂಭಗೊಂಡ ಸಂಸ್ಥೆ ಈಗ ಕಿವುಡರಿಗೆ ಕಲಿಸುವ ಶಿಕ್ಷಕರ ತರಬೇತಿ ಕೇಂದ್ರವಾಗಿದೆ. ಸುಮಾರು 1.93 ಹೆಕ್ಟೇರ್ ಭೂಮಿಯಲ್ಲಿ ಹರಡಿಕೊಂಡಿರುವ ಈ ತರಬೇತಿ ಕೇಂದ್ರಕ್ಕೆ 411 ಲಕ್ಷ ರೂಪಾಯಿ ವೆಚ್ಚತಗುಲಿದೆ.

ಕಲ್ಕತ್ತಾ, ದೆಹಲಿ, ಹೈದರಾಬಾದ್ ಮತ್ತು ಭುವನೇಶ್ವರ್ ನಗರಗಳಲ್ಲಿ ತನ್ನ ವಲಯ ಕಚೇರಿಗಳನ್ನು ಈ ಸಂಸ್ಥೆ ಹೊಂದಿದೆ. ಸುಮಾರು 5,000 ಮಂದಿ ಕಿವುಡರ ಈ ಸಂಸ್ಥೆಯಿಂದ ಪ್ರಯೋಜನ ಪಡೆದಿರುವರು. ಸಂಸ್ಥೆಯ ಅವಿರತ ಪ್ರಯತ್ನದಿಂದಾಗಿ ಭಿವಂಡಿಯಲ್ಲಿ ಕಿವುಡರಿಗಾಗಿ ಶಾಲೆಯು ಮತ್ತು ಶಿವ್ಡಾದಲ್ಲಿ ಫೀಲ್ಡ್ ಟೆಸ್ಟಿಂಗ್ ಕೇಂದ್ರ ಕಾರ್ಯಾರಂಭಿಸಿವೆ

ಕಿವುಡರ ಸರ್ವತೋಮುಖ ಅಭಿವೃದ್ಧಿಗಾಗಿ ಈ ಸಂಸ್ಥೆ ಶ್ರಮ ವಹಿಸುತ್ತಿದೆ. ವಿದ್ಯಾಭ್ಯಾಸ, ಮನಶಾಸ್ತ್ರ, ಸಮಾಜಸೇವೆ, ವಿದ್ಯುನ್ಮಾನ ಹೀಗೆ ಎಲ್ಲಾ ರಂಗದಲ್ಲಿನ ಖ್ಯಾತ ಪ್ರೊಫೆಸರ್‌ಗಳು ಕಿವುಡರ ಭವಿಷ್ಯತ್ತನ್ನು ರೂಪಿಸಲು ಸಹಕಾರಿಯಾಗಿರುತ್ತಾರೆ. ಹಲವಾರು ಅಲ್ಪಾವಧಿಯ ಕೋರ್ಸ್‌ಗಳನ್ನು ಕೂಡಾ ನಿಯಮಿತ ಕಾಲಾವಧಿಯಲ್ಲಿ ನಡೆಸಲಾಗುತ್ತಿದೆ. ವೃತಿಪರ ಕೋರ್ಸ್‌ಗಳನ್ನು ಕೂಡಾ ಆರಂಭಿಸಲಾಗಿದೆ. ಕಿವುಡುತನವನ್ನು ಆರಂಭದಲ್ಲೇ ಗುರುತಿಸುವ ಬಗ್ಗೆ ಯುನಿಸೆಫ್‌ನೊಂದಿಗೆ ಸಂಶೋಧನೆಯನ್ನು ಮಾಡುತ್ತಿದೆ.

ಕೇಂದ್ರ ಸರ್ಕಾರದ ಸಮಾಜ ಕಲ್ಯಾಣ ಸಚಿವಾಲಯ ಕಿವುಡರ ಸಂಹಾಯಕ್ಕೆ ಮುಂದೆ ಬಂತು. ತಿಂಗಳಿಗೆ 1200ರೂ. ಗಿಂತ ಕಡಿಮೆ ಆದಾಯವಿರುವ ಕಿವುಡರಿಗೆ

ಉಚಿತವಾಗಿ 'ಶ್ರವಣ ಉಪಕರಣ'. ಹಾಗು 2500 ರೂಪಾಯಿ ಆದಾಯವಿರುವ ಕಿವುಡರಿಗೆ ಶೇಕಡಾ 50 ಕಡಿತದಲ್ಲಿ ಶ್ರವಣ ಉಪಕರಣಗಳನ್ನು ಸಮಾಜ ಕಲ್ಯಾಣ ಇಲಾಖೆ ಹಂಚುತ್ತಿವೆ.

ಕಿವುಡರಿಗಾಗಿ ಭಾರತೀಯ ಭಾಷೆಯನ್ನು ಸಂಜ್ಞೆಗಳನ್ನು ಈ ಸಂಸ್ಥೆಯಲ್ಲಿ ಅಭಿವೃದ್ಧಿಪಡಿಸಲಾಗುತ್ತಿದೆ. ವೃತ್ತಿಪರ ಕೋರ್ಸ್, ರಾಷ್ಟ್ರೀಯ ವಾರ್ತಾ ಶಿಬಿರ ಹಾಗೂ ಇನ್ನಿತರ ಹಲಾವಾರು ತರಬೇತಿ ವರ್ಗಗಳನ್ನು ಅಲಿಯವರ್‌ಜಂಗ್ ರಾಷ್ಟ್ರೀಯ ಕಿವುಡರ ಸಂಸ್ಥೆಯಲ್ಲಿ ನಡೆಸಲಾಗುತ್ತಿದೆ.

ಭಾರತದಲ್ಲಿ ಸುಮಾರು 3.02 ದಶಲಕ್ಷ ಕಿವುಡರು ವಾಸಿಸುತ್ತಿರುವರು. ಅಥವಾ ಪ್ರತಿ 2000 ಮಂದಿಯಲ್ಲಿ ಒಬ್ಬರಿಗೆ ಕಿವುಡುತನದ ತೊಂದರೆ ಇದೆಯೆಂದು ಅಂದಾಜಿಸಲಾಗಿದೆ. ಕೆಲವರು ಹುಟ್ಟು ಕಿವುಡರಾಗಿರುತ್ತಾರೆ. ಸಂಪೂರ್ಣವಾಗಿ ಶ್ರವಣ ಶಕ್ತಿಯನ್ನು ಕಳೆದುಕೊಂಡವರಿರುತ್ತಾರೆ ಇನ್ನು ಕೆಲವರಿಗೆ ಸ್ವಲ್ಪ ಕಿವುಡುತನದ ತೊಂದರೆಯಾಗಿರುತ್ತದೆ ವಿನಹ ಅವರು ಪೂರ್ಣ ಶ್ರವಣ ಶಕ್ತಿಯನ್ನು ಕಳೆದುಕೊಂಡಿರುವುದಿಲ್ಲ. ಇಂಥಹ ಕಿವುಡರಿಗೆ ಸಹಾಯ ಮಾಡಬೇಕಾದ ಆವಶ್ಯಕತೆ ಇದೆ. ಈ ಅಂಗವಿಕಲರಿಗೆ ಸಮಾಜದಿಂದ ಸ್ವಲ್ಪ ಸಹಾಯ ದೊರಕಿದಲ್ಲಿ ಅವರು ನಮ್ಮ ಸಮಾಜಕ್ಕೆ ಆಸ್ತಿಯಾಗುತ್ತಾರೆ.

ಅಂಗವಿಕಲರಿಗೆ ಸಹಾನುಭೂತಿ ಮಾತ್ರವಲ್ಲ ಮುಖ್ಯವಾಗಿ ಸಹಕಾರ ಬೇಕಾಗಿದೆ. ಆಗ ಮಾತ್ರ ಅವರೂ ಜನಸಾಮಾನ್ಯರಂತೆ ಬಾಳಬಲ್ಲರು. ಕಿವುಡರ ರೋಧನ ನಮ್ಮ ಸಮಾಜ ಕೇಳಿಸುತ್ತಲೇ ಇರಲಿಲ್ಲ ಅಲಿ ಯಾವರ್ ಜಂಗ್ ರಾಷ್ಟ್ರೀಯ ಕಿವುಡರ ಸಂಸ್ಥೆ ಈ ನಿಟ್ಟಿನಲ್ಲಿ ಕಿವುಡರ ಆಶಾಕಿರಣವಾಗಿದೆ. ಅದ್ದರಿಂದಲೇ ಕಿವುಡುತನ ನಿಧಾನವಾಗಿ ದೂರವಾಗುತ್ತಿದೆ.

---

# ಮಹರ್ಷಿ ಅರವಿಂದರ ದೇಶ ದೇವಿ

– ಟಿ. ಎನ್. ಮಹಾದೇವಯ್ಯ B.Sc,

ದೇಶ ರಾಷ್ಟ್ರಭಕ್ತನ ದೇವಮಂದಿರ. ಅವನ ನಿಚ್ಚಪೂಜೆ, ಪ್ರೇಮದ ಕಾಣಿಕೆ ಆ ದೇಶ ಭಕ್ತದೇವಿಯ ಚರಣ ಸರಸಿಜದಲ್ಲಿ! ರಾಷ್ಟ್ರೀಯತೆಯ ಆದರ್ಶ ಮನೋಧರ್ಮವೇ ಆ ಸಾಧನೆಯ ಶಮದಮಾದಿ ಷಂಟ್ಸಂಪತ್ತಿ! ದೇಶಪ್ರೇಮವೇ ಅಲ್ಲಿನ ನಾಂದೀ ಮಂತ್ರ! ಜಾತಿ ಮತ ಪಂಥಗಳಾಚೆ, ಧರ್ಮಾಧರ್ಮಗಳ ತಿಕ್ಕಾಟದಾಚೆ, ಮಾನ

ಸಿಕ ವೈಷಮ್ಯ ದೌರ್ಬಲ್ಯಗಳಾಚೆ, ಬಹುದೂರದಾಚೆ ಆ ದಿವ್ಯಮಂದಿರವಿದೆ. ಯಾವ ವಿಧವಾದ ಸಂಕುಚಿತ ಮನೋಭಾವಕ್ಕೂ ಅಲ್ಲಿ ಅವಕಾಶವಿಲ್ಲ! ಆ ದೂರದ ದಿವ್ಯ ದೇಗುಲದಲ್ಲಿ ಸದಾ ಕೇಳಿ ಬರುವುದು ಒಂದೇ ಶಂಖಾನಿನಾದ! ಒಂದೇ ಝೇಂಕಾರ!

ದೇಶವೇ ರಾಷ್ಟ್ರೀಯತ್ವದ ಪ್ರತಿಷ್ಠಾಭೂಮಿ. ಜಾತಿಅಲ್ಲ. ಧರ್ಮಅಲ್ಲ; ಇನ್ನೇನೂಅಲ್ಲ. ದೇಶವೊಂದೇ! –ಅರವಿಂದರು.

ರಾಷ್ಟ್ರದ ಆರ್ಥಿಕ, ಸಾಮಾಜಿಕ ಸಮಸ್ಯೆಗಳು ಅನಂತವಿರಲಿ. ಕೈಗಾರಿಕೆ ಉದ್ಯೋಗಗಳ ರಾಷ್ಟ್ರೀಕರಣದ ಸಮಸ್ಯೆಗಳೂ ಅತ್ತಿರಲಿ. ಪರಸ್ಪರ ವೈಯಕ್ತಿಕ ವಿರೋಧಗಳೂ, ಕಾರ್ಯಕ್ರಮದಲ್ಲಿನ ಆಭಾಸ ಅನುಮಾನಗಳ ನಿತ್ಯ ಹೋರಾಟ ನಡೆಯುತ್ತಿರಲಿ! ಗಯಟೆ ಹೇಳುವಂತೆ 'ಶಿಖರಗಳು ನಮ್ಮನ್ನು ಆಕರ್ಷಿಸುತ್ತವೆಯೇ ಹೊರತು ಅದಕ್ಕೇರಿ ಹೋಗಲು ಮಾಡಿದ ಮೆಟ್ಟಲುಗಳಲ್ಲ!" ಈ ಮಾರ್ಗಗಳು ಒಂದು ಉನ್ನತ ಧ್ಯೇಯದ ರಾಜಮಾರ್ಗದಲ್ಲಿ ನೆಟ್ಟ ನೆರಳಿನ ವೃಕ್ಷಗಳು. ಭವ್ಯವಾದ ಮುಕ್ತಾಯಕ್ಕೆ ಪೂರಕಗಳು. ರಾಷ್ಟ್ರದ ಬೃಹದ್ದರ್ಶನದ ಎದುರಿನಲ್ಲಿ ಇವು ಪ್ರಗಾಢ ಪ್ರತೀಕಗಳಲ್ಲ! ರಾಷ್ಟ್ರವೆಂದರೆ ಸಹಸ್ರಾರು ಚಿತ್ರರಂಜಿತ ಭಿತ್ತಿ ವಾತಾಯನ, ಸ್ಥಂಭ ಮೂಲೆಗಳಂತಹ ಗೌಣ ಪರಿಕಣಗಳಿಂದ ವಿಭಿನ್ನವಾದರೂ, ಅಭಿನ್ನವಾಗಿ ತುಂಡುಗಳ ಸಂಘಟನೆಯಿಂದ ಸಂಪೂರ್ಣತೆ ಪಡೆದು ಸುಸಜ್ಜಿತವಾಗಿ, ಸುಶೋಭಿತವಾಗಿ ನಿಂತ ಮಹಾಮಾತೆಯ ದೇಗುಲ !

'ಅನೆಷ್ಟೋ ಪರಸ್ಪರ ವಿರೋಧಗಳಿಂದ ಜಾತಿಗಳು ಒಂದು ದೇಶದಲ್ಲಿ ನಿವಾಸಿಸುತ್ತವೆ. ಅವುಗಳಲ್ಲಿ ಎಂದೆಂದೂ ಸದ್ಭಾವ, ಏಕತೆ, ಮೈತ್ರಿ ಇದ್ದಿಲ್ಲ. ಆದರೆ ಅಂಜಿಕೆಯ ವಿಷಯ ಯಾವುದು ? ಯಾವಾಗ ಒಂದು ದೇಶವಿದೆ; ಒಬ್ಬ ತಾಯಿ ಇದ್ದಾಳೆ; ಆವಾಗ ಒಂದು ದಿನ ಏಕತೆಯು ಬರತಕ್ಕದ್ದೇ. ಅನೇಕ ಜಾತಿಗಳ ಮಿಲನದಿಂದ ಒಂದು ಬಲಶಾಲಿಯೂ ಅಜೇಯವೂ ಆದ ಜನಾಂಗವು ಉತ್ಪನ್ನ-ವಾಗತಕ್ಕದ್ದೇ! ಧರ್ಮಮತಗಳು ಒಂದಾಗಿಲ್ಲ; ಸಂಪ್ರದಾಯಿ ಸಂಪ್ರದಾಯಗಳಲ್ಲಿ ಚಿರ ವಿರೋಧವಿದೆ, ಮೇಳವಿಲ್ಲ ಮೆಳವಿಸುವ ಆಶೆಯು ಇಲ್ಲ. ಆದರೂ ಅಂಜಿಕೆಯ ಯಾವ ವಿಷಯವೂ ಇವು ಅಲ್ಲ. ಒಂದು ದಿನ ಸ್ವದೇಶ ಮೂರ್ತಿಧಾರಣೆ-ಯಾದ ಪ್ರಬಲವಾದ ಆಕರ್ಷಣದಿಂದ ಛಲ, ಬಲ, ಸಾಮ, ದಂಡ ಹಾಗೂ ದಾನ ಗಳಿಂದ ಮೇಳವುಂಟಾಗಿಯೇ ಬಿಡುವುದು."

–ಅರವಿಂದರು.

ಇದು ಮಹರ್ಷಿಗಳ ಭವಿಷ್ಯವಾಣಿ. ಪರಸ್ಪರ ಒಗ್ಗದ, ಒಪ್ಪದ ಸಂಪ್ರದಾಯ ಗಳಿಗಾಗಿ, ಅಂಜಬೇಕಾಗಿಲ್ಲ. ನಿತ್ಯ ನಡೆವ ಮತೀಯ ಹೋರಾಟಗಳ ಕೆಲಕಾಲ ಮಾತ್ರ. ಅವುಗಳ ಗೊಂದಲದಲ್ಲಿ ಸಿಲ್ಕಿ ರಾಷ್ಟ್ರ ನಿರ್ಮಾಣದ ಕಾರ್ಯ ಕುಸಿದು ಬಿದ್ದೀತೆಂದು ಬೆಚ್ಚ ಬೇಕಾಗಿಲ್ಲ.

# ವಿಶೇಷ ಲೇಖನ:- ಚಲನ ಚಿತ್ರ ಸೆನ್ಸಾರ್ ಮತ್ತು ಸಮಾಜ

ಭಾರತ ಸರ್ಕಾರದ ವಾರ್ತಾ ಶಾಖೆ ಬೆಂಗಳೂರು.

ಚಲನಚಿತ್ರ ಸೆನ್ಸಾರ್ ಭಾರತಕ್ಕೆ ಮಾತ್ರ ಸೀಮಿತವಲ್ಲ. ಅದು ವಿಶ್ವವ್ಯಾಪ್ತಿ. ಪ್ರಪಂಚದ ಹೆಚ್ಚಿನ ದೇಶಗಳು ಸೆನ್ಸಾರ್ ಕ್ರಮವನ್ನು ಅನುಸರಿಸುತ್ತವೆ. ಎಲ್ಲಾ ದೇಶದ ಸೆನ್ಸಾರ್ ಕ್ರಮ ಬೇರೆ ಬೇರೆ ಆಗಿರುತ್ತವೆ. ಕೇವಲ ಚುಂಬನ, ಅತ್ಯಾಚಾರ, ಅರೆನಗ್ನ ದೃಶ್ಯಗಳನ್ನು ಕತ್ತರಿಸುವುದು ಮಾತ್ರ ಸೆನ್ಸಾರ್‌ನ ಕೆಲಸವೇ ? ಹಾಗೆ ಮಾಡಿದಲ್ಲಿ ಅದು ಅಭಿವ್ಯಕ್ತ ಸ್ವಾತಂತ್ರ್ಯಕ್ಕೆ ಅಡ್ಡಿಪಡಿಸಿದಂತೆ ಆಗುವುದಿಲ್ಲವೇ ? ಈ ಹಿನ್ನೆಲೆಯಲ್ಲಿ ಭಾರತೀಯ ಚಲನಚಿತ್ರ ಸೆನ್ಸಾರ್‌ನ ಕಾರ್ಯವೈಖರಿಯನ್ನು ಈ ಲೇಖನದಲ್ಲಿ ವಿಶ್ಲೇಷಿಸಲಾಗಿದೆ.

ಚಲನಚಿತ್ರಗಳ ಸೆನ್ಸಾರ್ ಜನರ ಅಭಿವ್ಯಕ್ತಪಡಿಸುವ ಹಕ್ಕಿನ ಮೇಲೆ ಆಕ್ರಮಣ ಎಂಬುದು ಕೆಲವರ ವಾದ. ಸಮಾಜದ ದೃಷ್ಟಿಯಿಂದ ಸೆನ್ಸಾರಶಿಪ್ ಅಗತ್ಯ ಎಂಬುದು ಇನ್ನು ಕೆಲವರ ಅಂಬೋಣ. ಈ ಬಗ್ಗೆ ವಾದ ವಿವಾದಗಳು ಬಹಳ ಸಮಯದಿಂದ ನಡೆಯುತ್ತಲೇ ಬಂದಿದೆ.

ಈಗಿನ ಸಮಾಜದಲ್ಲಿ ಸಿನಿಮಾ ಮಾಧ್ಯಮ ಅತ್ಯಂತ ಪ್ರಬಲ. ಅದರಲ್ಲೂ ವಿಶಾಲ ಭೌಗೋಲಿಕ ಪ್ರದೇಶವನ್ನು ಹೊಂದಿರುವ ಭಾರತದಂತಹ ರಾಷ್ಟ್ರದ ಬಡ ಜನತೆಗೆ ಸಿನಿಮಾವೇ ಪ್ರಮುಖ ಮನರಂಜನಾ ಮಾಧ್ಯಮ. ಸಿನಿಮಾವೇ ಪ್ರಮುಖ ವಾರ್ತಾ ಹಾಗೂ ಶಿಕ್ಷಣ ಮಾಧ್ಯಮ. ಒಟ್ಟಾರೆ ಹೇಳುವುದಾದರೆ ಸಮಾಜವನ್ನು ರೂಪಿಸುವಲ್ಲಿ ಅಥವಾ ಒಂದು ಸಮಾಜದ ಒಳಿತು–ಕೆಡುಕುಗಳಲ್ಲಿ ಸಿನಿಮಾ ಮಾಧ್ಯಮದ ಪ್ರಭಾವವನ್ನು ಕಾಣಬಹುದಾಗಿದೆ.

ಸಮಾಜವನ್ನು ರೂಪಿಸಲು ಸಹಕಾರಿಯಾಗುವ ಈ ಪ್ರಬಲ ಅಸ್ತ್ರವನ್ನು ದುರುಪಯೋಗ ಪಡಿಸಬಹುದೆಂಬ ಸಂದೇಹದಿಂದಾಗಿ ಸೆನ್ಸಾರ್‌ಶಿಪ್ ಕ್ರಮ ಆರಂಭವಾಯಿತು. ಆದರೆ ಎಲ್ಲಾ ದೇಶಗಳು ಒಂದೇ ತರಹದ ಸೆನ್ಸಾರ್‌ಶಿಪ್ ಕ್ರಮವನ್ನು ಅನುಸರಿಸುತ್ತಿಲ್ಲ. ಪ್ರತಿ ದೇಶವು ತನ್ನದೇ ಆದ ರಾಜಕೀಯ, ಸಾಮಾಜಿಕ, ಬೌದ್ಧಿಕ ಮೌಲಿಕ ವಿಷಯಗಳನ್ನು ಗಣನೆಗೆ ತೆಗೆದುಕೊಂಡು ಸೆನ್ಸಾರ್ ಶಿಪ್‌ನ್ನು ಮಾಡುತ್ತಿದೆ.

ಅಮೇರಿಕಾದಂತ ಮುಂದುವರಿದ ದೇಶದಲ್ಲಿ ಸೆನಾರ್‌ಶಿಪ್ ಎಂದರೆ ಕೇವಲ ವಿಂಗಡಣೆ ಮಾತ್ರ. ಸಿನೇಮಾ ಕೈಗಾರಿಕೆಯ ಜನರೇ ಹೆಚ್ಚು ಸಂಖ್ಯೆಯಲ್ಲಿ ಇರುವ 'ಮೋಷನ್ ಪಿಕ್ಚರ್ಸ್ ಅಸೋಸಿಯೇಶನ್ ಅಫ್ ಅಮೇರಿಕಾ' ಎಂಬ ಖಾಸಗಿ ಸಂಸ್ಥೆ ಸೆನ್ಸಾರ್ ಶಿಪ್ ಕಾರ್ಯ ನೆರವೇರಿಸುತ್ತಿದೆ. ಸುಡಾನ್ ಇಂಡೋನೇಷಿಯಾ ಮತ್ತು ಬರ್ಮಾ ದೇಶದಲ್ಲಿ ಸೆನ್ಸಾರ್‌ಶಿಪ್ ಕಾನೂನು ಬದ್ಧ ಕ್ರಮವಾಗಿದ್ದು ಪೂರ್ತಿಯಾಗಿ ಸರ್ಕಾರಿ ಕಾರ್ಯವಾಗಿದೆ. ಇನ್ನು ಕೆಲವು ದೇಶಗಳಲ್ಲಿ ಕಾನೂನು ಹಾಗೂ ಇತರ ಕೆಲವು ಸಂಸ್ಥೆಗಳು ಜಂಟಿಯಾಗಿ ಈ ಕಾರ್ಯನಿರ್ವಹಿಸುತ್ತಿವೆ.

ನಕಾರಾತ್ಮಕವಾಗಿ ಕೆಲಸ ಮಾಡುವುದು ಸೆನ್ಸಾರ್‌ರವರ ಕೆಲಸ ಎಂಬುದು ಹೆಚ್ಚಿನವರ ಮಾತು. ನಿಜವಾಗಿ ಹೇಳುವುದಾದರೆ ಇದು ರಚನಾತ್ಮಕ ಕೆಲಸ ಮಾಡುತ್ತಿದೆ ಸಾಮಾಜಿಕ ಮತ್ತು ಮೌಲಿಕ ಸಿದ್ಧಾಂತಗಳ ಮೇಲೆ ನಿಂತಿರುವ ಭಾರತೀಯ ಸಮಾಜವನ್ನು ರಕ್ಷಿಸುವ ಕಾರ್ಯವನ್ನು ಸೆನ್ಸಾರ್ ಮಾಡುತ್ತಿದೆ. ಭಾರತ ವಿಶಾಲವಾದ ದೇಶ. ಇಲ್ಲಿಯ ಜನರ ಬದುಕು, ಸಂಸ್ಕೃತಿ ವಿಚಾರಗಳು ಪ್ರದೇಶದಿಂದ ಪ್ರದೇಶಕ್ಕೆ ಬದಲಾಗಿರುತ್ತದೆ. ಇಂಥ ಸಂದರ್ಭದಲ್ಲಿ ಸಿನೇಮಾದಂಥಹ ಮಾಧ್ಯಮಗಳು ಜನರಲ್ಲಿ ಒಗ್ಗಟು ಐಕ್ಯತೆ ಹಾಗೂ ರಾಷ್ಟ್ರೀಯ ಮನೋಭಾವನೆ ಮೂಡಿಸಬಲ್ಲುದು. ಇದೇ ಮಾಧ್ಯಮ ಜನರಲ್ಲಿ ಜಾತೀಯತೆ. ಬಾಷಾಂಧತೆಯ ವಿಷ ಬೀಜಗಳನ್ನು ಬಿತ್ತಿ. ಸಮಾಜದ ವಾತಾವರಣವನ್ನು ಕೆಡಿಸುವ ಎಲ್ಲ ಸಾಧ್ಯತೆಯೂ ಇದೇಯಲ್ಲವೇ?

'ವಯಸ್ಕರಿಗೆ ಮಾತ್ರ' ಎಂಬ ಸರ್ಟಿಫಿಕೇಟ್ ಕೊಡುವುದಕ್ಕಿಂತಲೂ ನಮ್ಮ ಸೆನ್ಸಾರ್ ಇಂಥಹ ಕೆಲಸವನ್ನು ಮಾಡುತ್ತಿದೆ. ಸಾವಿರಾರು ವರ್ಷಗಳಿಂದ ನಡೆದು ಬಂದ ನಮ್ಮ ಪರಂಪರೆ, ಸಂಸ್ಕೃತಿ ಮತ್ತು ವಿಚಾರಗಳು ಒಮ್ಮೆ ಎಡವಿಬಿದ್ದಲ್ಲಿ ಅದು ಸಮಾಜದ ಪ್ರಗತಿಗೆ ಮಾರಕ ಹೊಡೆಂ-ನೆನ್ನಬಹುದು.

ಅತ್ಯಾಚರ, ಅಶ್ಲೀಲತೆ, ಅಪಾರಾಧ ಮತ್ತು ಹಿಂಸೆ ನಮ್ಮ ಸಮಾಜದ ಆಗು ಹೋಗುಗಳಲ್ಲಿ ಒಂದು. ಹಾಗಾಗಿ ಅದನ್ನು ಸಿನೀಮಾದಲ್ಲಿ ತೋರಿಸುವುದು ತಪ್ಪು ಅಲ್ಲ ಎಂಬುದು ಕೆಲವರ ವಾದ, ಆದರೆ ಅಶ್ಲೀಲ್ಲತೆ, ಅಪರಾಧ ಮತ್ತು ಹಿಂಸೆಯನ್ನು ಸಿನೇಮಾದಲ್ಲಿ ವೈಭವೀ ಕರಿಸಲಾಗುತ್ತಿದೆ ಮಾತ್ರವಲ್ಲ ಅದನ್ನು ಮಾರಾಟದ ವಸ್ತುವಾಗಿ ಬಳಸಲಾಗುತ್ತಿರುವುದು. ದುರದೃಷ್ಟಕರ ಬಾಕ್ಸ್ ಆಫೀಸ್‌ದಲ್ಲಿ ಹಣ ಮಾಡಲು ಪ್ರತಿ ಸಿನೇಮಾದಲ್ಲೂ ಇಂಥ ದೃಶ್ಯವನ್ನು ತುರುಕಿಸಲಾಗುತ್ತಿದೆ. ಇದು ಖಂಡಿತವಾಗಿಯೂ ಜನ ಸಮೂಹದ ಮೇಲೆ ದುಷ್ಪರಿಣಾಮ ಬೀರುವುದರಲ್ಲಿ ಸಂಶಯವಿಲ್ಲ.

ಪ್ರತೀ ಚಲನಚಿತ್ರದ ಕಥೆ, ಸಿದ್ಧಾಂತ, ತತ್ವದ ಹಿನ್ನಲೆಯಲ್ಲಿ ಪರಾಮರ್ಶಿಸಬೇಕಾಗಿದೆ. ಆ ಕಥೆಯಲ್ಲಿ ಚುಂಬನ, ಅಥವಾ ಹಿಂಸೆ ಅಗತ್ಯ ಎಂದು ತೋರಿಬಂದಲ್ಲಿ ಅದನ್ನು ಜನರಿಗೆ ಸ್ಪಂದಿಸುವ ರೀತಿಯಲ್ಲಿ ಚಿತ್ರೀಕರಿಸಬೇಕಾಗಿದೆ. ನೇರವಾಗಿ ಹೇಳುವ ಬದಲು ಬೇರೆ ವಿಧದಲ್ಲಿ ಕಲಾತ್ಮಕವಾಗಿದೆ. ಆದರೆ ಕಲಾತ್ಮಕ ಚಿತ್ರಕ್ಕಿಂತ ಮಸಾಲೆ ಚಿತ್ರವನ್ನು ಹೆಚ್ಚುಚ್ಚು ತಯಾರಿಸಲಾಗುತ್ತಿದೆ. ಇಂಥ ಕೆಟ್ಟ ಅಭಿರುಚಿಯ ಚಿತ್ರದಿಂದ ಕೆಲವೇ ಕೆಲವು ಜನರು ಶ್ರೀಮಂತರಾಗುತ್ತಾರೆ. ಅದಕ್ಕಿಂತ ಮುಖ್ಯವಾಗಿ ಮೌಲಿಕ ಸಿದ್ಧಾಂತಗಳ ಚೌಕಟ್ಟಿನಲ್ಲಿ ರಚಿಸಲ್ಪಟ್ಟ ಭಾರತೀಯ ಸಮಾಜವನ್ನು ಅದು ಅದ:ಪತನದತ್ತ ಒಯ್ಯುತ್ತದೆ.

ಅಪರಾಧ ಮತ್ತು ಹಿಂಸೆ ಮಾನವನ ವರ್ತನೆಗೆ ಅಥವಾ ಮನೋಧರ್ಮಕ್ಕೆ ವಿರೋಧವಾದ್ದು. ಅದರೆ ಸೆಕ್ಸ್ ಪ್ರತಿಯೊಬ್ಬನೂ ಜೀವನ ಅವಿಭಾಜ್ಯ ಅಂಗ. ಪ್ರತಿಯೊಬ್ಬನೂ ಜೀವನದಲ್ಲಿ ಹಾದು ಹೋಗಲೇ ಬೇಕಾದ ಪ್ರಮುಖವಾದ ಘಟ್ಟ.

ಅದನ್ನು ಅದುಮಿಡಬಾರದೆಂಬ ಚಿಂತನಶೀಲರ ವಾದವಾಗಿತ್ತು. ಡೆನ್ಮಾರ್ಕ್ ಮತ್ತು ಸ್ವೀಡನ್ ದೇಶಗಳು ಈ ತತ್ವವನ್ನು ಅನುಸರಿಸಿದವು. ತತ್ ಪರಿಣಾಮವಾಗಿ ಬ್ಲೂಫಿಲ್ಮ್‌ಗಳು ದಿನಬೆಳಗಾಗುವದರೊಳಗೆ ಪ್ರಸಿದ್ಧಿಗೆ ಬಂದವು. ನಮ್ಮ ಭಾರತೀಯ ಸಮಾಜಕ್ಕೆ ಇದು ಎಷ್ಟು ಸಹಕಾರಿಯಾದೀತು ? ಕೌಟುಂಬಿಕ ನೆಲೆ ಮತ್ತು ಪರಸ್ಪರ ಸಹಬಾಳ್ವೆತೆಯ ಸಂಪ್ರದಾಯದಲ್ಲಿ ಬಾಳುವ ನಮ್ಮ ಸಮಾಜಕ್ಕೆ ಇದು ಸಹಕಾರಿಯಾಗದು.

ಸಿನೇಮಾ ಕೈಗಾರಿಕೆ ಕೂಡಾ ಈಗ ಸಂಕಷ್ಟದಲ್ಲಿದೆ. ಸಿನೇಮಾ ತಯಾರಿಕಾ ವೆಚ್ಚ ಒಂದೇ ಸಮನೆ ಏರುತ್ತಿದೆ. ಪ್ರದರ್ಶನಕ್ಕೆ ಚಿತ್ರಮಂದಿರಗಳು ದೊರೆಯುತ್ತಿಲ್ಲ. ಈ ಎಲ್ಲ ಕಾರಣಗಳಿಂದಾಗಿ ಕಲಾತ್ಮಕ ಚಿತ್ರ ತೆಗೆದು ಪರಿಸ್ಥಿತಿಯೊಂದಿಗೆ ರಾಜಿ ಮಾಡಿಕೊಳ್ಳಬೇಕಾಗಿದೆ ಎಂಬುದು ಕೆಲವರ ವಾದ. ಆದರೆ ಹಳೆಯ ಕಲಾತ್ಮಕ ಚಿತ್ರಗಳು ಸಾಮಾಜಿಕ ಸಮಸ್ಯೆಯನ್ನು ಎತ್ತಿ ತೋರಿಸುವುದರೊಂದಿಗೆ ವ್ಯಾವಹಾರಿಕವಾಗಿಯೂ ಸಾಕಷ್ಟು ಯಶಸ್ವಿಯಾದ ಉದಾಹರಣೆಗಳು ಕೂಡಾ ಸಾಕಷ್ಟಿರುವಾಗ ಈ ವಾದಕ್ಕೆ ಪುಷ್ಠಿ ಇಲ್ಲವೆನ್ನಬಹುದು.

ಭಾರತದಲ್ಲಿ ಸೆನ್ಸಾರ್ ಮಂಡಳಿಯಲ್ಲಿ ಹೆಚ್ಚಾಗಿ ಸಮಾಜದ ಪ್ರತಿನಿಧಿಗಳಿರುತ್ತಾರೆ. ಇತರ ದೇಶಗಳಂತೆ ಇಲ್ಲಿಯ ಕಾರ್ಯನಿರ್ವಹಣೆ ಪೂರ್ಣವಾಗಿ ಸರ್ಕಾರದಿಂದಲೇ ನಡೆಸಲ್ಪಡುತ್ತಿಲ್ಲ. ಜನಸಮೂಹವನ್ನು ಹೆಚ್ಚೆಚ್ಚು ಆಕರ್ಷಿಸುತ್ತಿರುವ ಸಿನೇಮಾ ಮಾಧ್ಯಮದ ಪ್ರಭಾವವನ್ನು ರಚನಾತ್ಮಕ ಕಾರ್ಯಕ್ಕೆ ಅಥವಾ ಸಮಾಜದ ಉನ್ನತಿಗೆ ಬಳಸುವಲ್ಲಿ ಸೆನ್ಸಾರ್ ಮಂಡಳಿ ತನ್ನ ಕಾರ್ಯನಿರ್ವಹಿಸುತ್ತಿದೆ. ಸಿನೇಮಾ ಮತ್ತು ಸಮಾಜದ ನಡುವಿನ ಸೌಹಾರ್ದತೆ, ಅಭಿವೃದ್ಧಿ ಮತ್ತು ಶ್ರೇಯಸ್ಸಿನ ಕೊಂಡಿಯಾಗಿ ಸೆನ್ಸಾರ್ ಮಂಡಳಿ ಕಾರ್ಯನಿರ್ವಹಿಸುತ್ತಿದೆ.

---

## ಶ್ರದ್ಧಾಂಜಲಿ

ಶ್ರೀ ಸಿದ್ಧಗಂಗಾ ತಾಂತ್ರಿಕ ಶಿಕ್ಷಣ ಸಂಸ್ಥೆಯಲ್ಲಿ ಗಣಿತ ಶಾಸ್ತ್ರದ ಉಪಪ್ರಾಧ್ಯಾಪಕರೂ, ಉತ್ತಮ ಚೆಸ್ ಆಟಗಾರರೂ, ತೋಟಗಾರಿಕೆಯಲ್ಲಿ ಅಭಿರುಚಿಯನ್ನುಳ್ಳವರೂ, ಗ್ರಂಥ ಕರ್ತರೂ, ಆಗಿದ್ದ ಶ್ರೀ ಭಾಗ್ಯರಾಜ್‌ರಾವ್‌ರವರ ನಿಧನಕ್ಕೆ '**ಸಿದ್ಧಗಂಗಾ**' ಸಂತಾಪವನ್ನು ವ್ಯಕ್ತಪಡಿಸುತ್ತಾ, ದಿವಂಗತರ ಆತ್ಮಕ್ಕೆ ಬಸವಾದಿ ಶರಣರು ಶಾಂತಿಯನ್ನು ಕರುಣಿಸಲೆಂದೂ, ದಿವಂಗತರ ಕುಟುಂಬದವರಿಗೆ ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ನೀಡಲೆಂದೂ ಪ್ರಾರ್ಥಿಸುತ್ತದೆ.

# ಗುರೋಪದೇಶ

**ದೇವೇಂದ್ರಪ್ಪ ಮಹಾದೇವಪ್ಪ ಬಡಿಗೇರ.** ಶಾಲಾ ಶಿಕ್ಷಕರು, ಗೋಕುಲ (ಹುಬ್ಬ
ಉಚಿತ ಆಯುರ್ವೇದ ಚಿಕಿತ್ಸಾ ಸಲಹೆ ಗಾರರು, R M P. M I H. ಹಿಂದಿ ಸಾಹಿತ್ಯ ಸುಧಾಕರ

ಹೊಲಬನರಿಯಧಗುರುವು, ಸುಲಭ
ನಲ್ಲದ ಶಿಷ್ಯ, ಕೆಲಬನ ನೋಡಿ
ವಿಚಾರಿಸಿ ಮಾಡದುಪದೇಶ ಅಂಧಕನ
ಕೈಯ ಅಂಧಕ ಹಿಡಿದಂತೆ-ಕಾಣಾ ರಾಮನಾಥಾ

ಯಾವ ಜಾತಿಯವನೇ ಆಗಲಿ ಉಪದೇಶ ಮಾಡತಕ್ಕ ಗುರುವು ತಾನು ಜ್ಞಾ
ಯಾಗಿರತಕ್ಕದ್ದು. ಮತ್ತು ಉಪದೇಶವನ್ನು ಪಡೆಯತಕ್ಕ ಶಿಷ್ಯನಾದರೂ ಸ
ತಿಳಿದುಕೊಳ್ಳಲು ಸಮರ್ಥನಾಗಿರಬೇಕು. ಹೀಗೆ ಇಲ್ಲದ ಗುರುಶಿಷ್ಯರು ಇದ್ದ
ಒಬ್ಬ ಕುರುಡನು ಮತ್ತೊಬ್ಬ ಕುರುಡನಿಗೆ ಒಂದು ಗ್ರಾಮಕ್ಕೆ ಹೋಗಲು ಮಾಗ
ವನ್ನು ತೋರಿಸದಂತಾಗುವದಷ್ಟೇ ಸರಿ. ಗುರುವಾದವನು ಮೊದಲು ದೇವರಿಂ
ಅಪ್ಪಣೆಯ ಸ್ಫೂರ್ತಿಯನ್ನು ಪಡೆಯಬೇಕು. ಎಲ್ಲಿಯವರೆಗೆ ಉಪದೇಶ ಮಾ
ತಕ್ಕವನಿಗೆ ದೇವರ ಸ್ಫೂರ್ತಿಯ ಚಿನ್ಹೆ ಇಲ್ಲವೋ ಅಲ್ಲಿಯವರೆಗೆ ತಾನು ಜೀವಂ
ಇರುವ ತನಕ ಉಪದೇಶವನ್ನು ಮಾಡಬಹುದು. ಆದರೆ ಇದರಿಂದ ಏನ
ಪ್ರಯೋಜನವಿಲ್ಲ. ವ್ಯರ್ಥವಾಗಿ ತನ್ನ ಶಕ್ತಿಯನ್ನು ಕಡಿಮೆ ಮಾಡಿಕೊಳ್ಳುವನು.

ಗುರುವು ಉಪದೇಶ ಮಾಡಿದ ಕೂಡಲೇ ಮನಸ್ಸಿನಲ್ಲಿರುವ ವಿಷಯಲೋಲುಪತೆ
ಗಳು ಹೊರಟು ಹೋಗತಕ್ಕದ್ದು ಅಲ್ಲದೆ ಪೂರ್ವಜನ್ಮದ ದುಷ್ಟ ಸಂಸ್ಕಾರಗಳೂ ಸ
ನಾಯವಾಗಬೇಕು. ಉರಿಯುವ ಜ್ವಾಲೆಯು ಹಸಿಯ ಕಟ್ಟಿಗೆಗಳನ್ನು ಹಾಕಿದ ಕೂಡ
ಸುಟ್ಟು ಭಸ್ಮ ಮಾಡುವಂತೆ ಗುರುವಾದವನು ತನ್ನ ಭಕ್ತನನ್ನು ಅನುಗ್ರಹಿಸಿದ
ಅಥವಾ ಸ್ಪರ್ಶಿಸಿದರೆ ಅವನಲ್ಲಿಯ ಪಾಪದ ರಾಶಿಗಳು ನಾಶವಾಗತಕ್ಕದ್ದು. ಅಂದ
ಅವನು ನಿಜವಾದ ಗುರು. ಈ ಪ್ರೀತಿ ಎಂಬ ಕಡಲಿನಲ್ಲಿ ಮುಳುವುದಕ
ಯಾರಿಗಾದರೂ ಶಾಂತಿ ಇದೆ ಏನು ? ಇಲ್ಲ ಅಥವಾ ಆಶೆಯಾದರೂ ಇದೆಯೋ
ಇದು ಸಹ ಇಲ್ಲ. ಪ್ರಾಪಂಚಿಕ ವಸ್ತುಗಳಮೇಲೆ ವಿಶೇಷ ವೈರಾಗ್ಯ ಮತ್ತು ಸಾಧ
ಇವುಗಳ ಮೇಲೆಯೂ ಕೂಡಾ ಇಚ್ಛೆ ಇಲ್ಲ. ಆದರೆ ಎಲ್ಲಿಯೋ ನಾಲ್ಕಕ್ಷರಗಳನ
ಕಲಿತುಕೊಂಡು ಈಗಿನ ಕಾಲದಲ್ಲಿ ಎಲ್ಲರೂ ಉಪದೇಶ ಮಾಡುವರು. ಬೇರೊಬ್ಬರಿ
ಉಪದೇಶ ಮಾಡುವದು ಅತಿ ಕಷ್ಟದ ಕೆಲಸ.

ಪರಶಿವನನ್ನು ಸಾಕ್ಷಾತ್ಕಾರ ಮಾಡಿಕೊಂಡನಂತರ ಯಾರು ಆತನಿಂದ ಪ್ಪಣೆಯನ್ನು ಪಡೆಯುವರೋ ಅವರು ಮಾತ್ರ ಎರಡನೆಯವರಿಗೆ ಬೋಧಿಸಲಿಕ್ಕೆ ಯೋಗ್ಯರು. ಈಗಿನ ಕಾಲದ ಅಲ್ಪ ಪಾಂಡಿತ್ಯ ಉಳ್ಳ ಮಾನವನು ದೊಡ್ಡ ಪಂಡಿತನಂತೆ ಮತ್ತು ತಪಸ್ವಿಯಂತೆ ಬೋಧನೆ ಮಾಡಲಿಕ್ಕೆ ಹೋದರೆ, ಕೇವಲ ತನಗೆ ಮಾತ್ರ ಅನ್ನವಿದ್ದವನು ನೂರು ಜನರನ್ನು ಭೋಜನಕ್ಕೆ ಕರೆದಂತಾಗುವದು. ಅದ ಪ್ರಯುಕ್ತ ಮೊದಲು ತಾನು ಸಂಪೂರ್ಣ ಪಾಂಡಿತ್ಯವನ್ನು ಸಂಪಾದಿಸಿ, ಪರಮಾತ್ಮನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ಅನಂತರ ಉಪದೇಶ ಮಾಡ-ಬಹುದು. ಅದಕ್ಕೂ ಮೊದಲ ಬರುವದಿಲ್ಲ. ಮೊದಲು ತಾನು ಅದನ್ನು ಸಾಧಿಸಿರ ಬೇಕು. ಯಾಕಂದರೆ ತಾನು ಯಾವುದೋ ಒಂದು ಕೆಟ್ಟ ಕೆಲಸವನ್ನು ಮಾಡುತ್ತಾ ಇದ್ದು, ಎರಡನೆಯವರಿಗೆ ಮಾಡಬಾರದೆಂದು ಹೇಳಿದರೆ ಅವರು ಬಿಡಲಿಕ್ಕೆ ಸಾಧ್ಯವೇ? ಇಲ್ಲ ತಾನು ಮೊದಲು ಸದಾಚಾರ–ಸದ್ವರ್ತನೆಯಿಂದ ನಡೆದರೆ ಬೇರೆಯವರಿಗೆ ಹೀಗೆ ನಡೆಯಿರಿ ಎಂದು ಹೇಳಲು ಅವಶ್ಯವೇ ಬೀಳುವುದಿಲ್ಲ. ಇವನನ್ನು ನೋಡಿದವರು ಓಹೋ! ಇವರು ಇಷ್ಟು ನಿಯಮಾಚಾರಗಳಿಂದ ಜೀವನ ಸಾಗಿಸಬೇಕಾದರೆ ಇದರಲ್ಲಿ ಏನೋ ಒಂದು ಮಹತ್ತರವಾದ ಫಲವು ದೊರಕು-ವಂತೆ ಕಾಣುವುದು. ಅದಕ್ಕೋಸ್ಕರವಾಗಿಯೇ ಇವರು ನೇಮುಗಳನ್ನು ಪಾಲಿಸುವರು ಎಂದು ತಿಳಿದುಕೊಂಡು ಪ್ರಾರಂಭಿಸುವನು.

ಪ್ರಾಸಂಚಿಕ ವಿಷಯಗಳಲ್ಲಿ ಆಸಕ್ತಿ–ಯಿರುವವರಿಗೆ ಬ್ರಹ್ಮದೇವರು, ಸತ್ಯ ಅಸತ್ಯ ಹೀಗೆ ಇವೆಲ್ಲವುಗಳನ್ನು ವಿಚಾರ ಮಾಡಿದರೆ, ಏನೂಪ್ರಯೋಜನವಿಲ. ದೇವಾಲಯ ದಲ್ಲಿ ದೇವರಿಲ್ಲದೆ ಕರ್ಪುರ ಬೆಳಗಿ, ಶಂಖ ಊದಿ ಬಂದರೀತಿ–ಆಗುವುದು. ಆದಕಾರಣ ಬೋಧಮಾಡ ತಕ್ಕವನ್ನು ಮೊದಲು ಬ್ರಹ್ಮಚರ್ಯ, ತಪಸ್ಸು, ಯೋಗಾಭ್ಯಾಸ ಇತ್ಯಾದಿಗಳನ್ನು ಮಾಡಿ ಜ್ಞಾನವನ್ನು ಪಡೆಯುಬೇಕು. ಪರಶಿವನನ್ನು ಸರ್ವದ್ಯಾಧಾನ ಮಾಡುತ್ತಿರುವದೇ ಸರಿಯಾದ ಜ್ಞಾನ ಈ ರೀತಿಯಿಂದ ಜ್ಞಾನವೇ ಜ್ಞಾನಯೋಗವೆಂದು ಅನೇಕ ಗ್ರಂಥಗಳಿಂದ ತಿಳಿದು ಕೊಳ್ಳಬಹುದು. ಜ್ಞಾನಯೋಗವೆಂದರೆ ಜ್ಞಾನದ ಮೂಲಕ ಪರಶಿವನೊಂದಿಗೆ ಸಂಬಂಧವನ್ನು ಕಲ್ಪಿಸಿ ಕೊಳ್ಳುವದು. ನಿರಾಕಾರ' ನಿರ್ಗುಣನಾದ ಬ್ರಹ್ಮನನ್ನುಪಡೆಯುವುದೇ ಜ್ಞಾನಿಯ ಗುರಿ.

ಜ್ಞಾನಿಯಾದವನು ನೀತಿ ಎಂದು ಒಂದು ಅಸತ್ಯವಾದಮೇಲೆ ಎರಡನೇ ಅಸ ತ್ಯವನ್ನು ತೊರೆದು ಕೊನೆಗೆ ನಿತ್ಯ ಅನಿತ್ಯ ವಸ್ತುಗಳವಿಚಾರವು ನಿಲ್ಲುವವರೆಗೂ ಹೋಗಿ. ಕಳ್ಳನಂತೆ–ಸಮಾಧಿಯಲ್ಲಿ ಬ್ರಹ್ಮಸಾಕ್ಷಾತ್ಕಾರ ಮಾಡಿಕೊಳ್ಳುವನು ಹೇಗೆಂದರೆ ಚೋರನಾದವನು ಯಾವ ದುಡಿತವಿಲ್ಲದೆ ಅನಾಯಾಸವಾಗಿ ದ್ರವ್ಯವನ್ನು ಸಂಗ್ರ ಹಿಸಿ ಸುಖ–ವನ್ನು ಅನುಭವಿಸ ಬೇಕೆನುವನು ಅದಕ್ಕೆ ಅವನು ಸರಿಯಾದ ಶ್ರೀಮಂತರ ಬಂಗಲೆಯನ್ನುನೋಡಿ ಕನ್ನ ಹಾಕಿ ಒಳಗೆ ಹೋಗುವನು ಆದರೆ ಒಳಗೆ ಕತ್ತಲೆ

ಇರುವದರಿಂದ ಹಣದಪೆಟ್ಟಿಗೆಯು ಶೀಘ್ರವಾಗಿ ದೊರಕುವದಿಲ್ಲ ಅವಕ್ಕೆ ಅವಸ
ಕತ್ತಲೆಯಲ್ಲಿಯೇ ಕೈಯಾಡಿಸುತ್ತ ಹುಡುಕಲಿಕ್ಕೆ ಹತ್ತುವನು ಹುಡುಕುವಾಗಲಿಕ್ಕೆ ಯಾ
ದಾದರೊಂದು ಮರವೊ ಬುಟ್ಟಿಯೋ ಕೈಗೆ ಸಿಕ್ಕುವದು ಅದನ್ನು ಕೈಯಾಡಿಸಿ
ನೋಡಿ ಇದು ಹಣದ ಪೆಟ್ಟಿಗೆ ಅಲ್ಲವೆಂದು ತಿಳಿದು ಮುಂದಕ್ಕೆ ಹೋಗುವನು
ಅನಂತರ ಒಂದು ಖಾಲಿ ಚಿನುಣಿ ಎಣ್ಣೆ ಡಬ್ಬಸಿಕ್ಕರೆ ಓಹೋ ಇದು ಅಲ್ಲವೆನ್ನುವನು
ಹೀಗೆ ಎಲ್ಲವಸ್ತುಗಳನ್ನು ಮುಟ್ಟುತ್ತ ಇದೂಅಲ್ಲ ಇದುಅಲ್ಲ ಎಂದು ದ್ರವ್ಯದ ಪೆಟ್ಟಿ
ಗೆಯು ವರೆಗೂ ಹುಡುಕುತ್ತ ಬೇರೆಮನೆಗೆ ಹೋಗುವನ್ನು ಅಲ್ಲಿಹುಡುಕಿದ ನಂತರ
ಒಂದು ಭದ್ರವಾದ ಪೆಟ್ಟಿಗೆಯು ಕೈಗೆಹತ್ತುವದು ಅದನ್ನು ತುಂಬಾ ಕೈಯಾಡಿಸಿ
ಅಲುಗಾಡಿಸಿ ಇದೇ ಹಣದ ಪೆಟ್ಟಿಗೆಎಂದು ನಿಶ್ಚಯಿಸಿ ಪುನಃ ಮುಂದಕ್ಕೆ ಹುಡುಕದೆ
ಅದನ್ನು ತನ್ನ ಮನೆಗೆ ತೆಗೆದುಕೊಂಡು ಹೋಗುವನು ಇದರಂತೆಯೇ ದೇವರನ್ನು
ಪಡೆಯುವದೆಂದು ತಿಳಿಯಬೇಕು.

ಜ್ಞಾನವೂ ಕೂಡಾ ಮೂರು ವಿಧ ವಾಗಿದೆ ಎಂದು ಹೇಳಬಹುದು. ಯಾಕೆಂದರೆ
ಧ್ಯಾನದಿಂದ ಗೋಚರಿಸುವ ಜ್ಞಾನವೇಬೇರೆ ಮತ್ತು ತರ್ಕದಿಂದ ದೊರೆ
ಯುವ ಜ್ಞಾನವೇ ಬೇರೆ. ಅಲ್ಲದೆ ಇದಕ್ಕಿಂತಲೂ ಸಾಧಕನಿಗೆ ಸತ್ಯಸಾಕ್ಷಾತ್ಕಾರ
ವಾದ ಮೇಲೆ ಜ್ಞಾನವೇಬೇರೆ ಎಂದು ತಿಳಿಯಬಹುದು. ಮತ್ತು ಎಲ್ಲಿಯತನಕ-
ಸಾಧಕನಿಗೆ ದೇವರು ದೂರದಲ್ಲಿರುವನೆಂದು ಭಾಸವಾಗುವುದೋ ಅಲ್ಲಿಯ ವರೆಗೂ
ಇನ್ನೂಅಜ್ಞಾನವೇ ಇರುವದೆಂದು ಗುರುತಾಗುವದು. ಆದರೆ ದೇವರನ್ನು ನಮ್ಮ
ಅಂತರಂಗದಲ್ಲಿಯೇ ನೋಡಿದರೆ ಆಗನಿಜವಾದ ಜ್ಞಾನವಾಗುವದು. ಜ್ಞಾನಿಯಾದ
ನಂತರ ಪುನಃ ನಾನು ಎಂದು ಎಲ್ಲಿಯತನಕ ದೇಹಬುದ್ಧಿ ಇದೆಯೋ ಅಲ್ಲಿಯತನಕ
ಈ ಅಹಂಕಾರದಿಂದ ಅವನಿಗೆ ಬಹಳ ಅಪಾಯ ವಿರುವದಲ್ಲದೆ ಪುರೋಭಿವೃದ್ಧಿಗೂ
ಸಹ ಸಹಾಯಮಾಡಲಾರದು. ಕಾರಣ ಆವನಲ್ಲಿ ಎಳ್ಳಷ್ಟು ಕೂಡ ಅಹಂಕಾರ
ವಿರಕೂಡದು. ನಿಜವಾದ ಜ್ಞಾನವು ಐಕ್ಯತೆಗೆ ಒಯ್ಯುವದು. ಆದರೆ ಅಜ್ಞಾನವು
ಭಿನ್ನತೆಗೆ ಒಯ್ಯುವದೆಂದು ಲಕ್ಷ್ಯದಲ್ಲಿಡಬೇಕು.

ಬಹ್ಮಚರ್ಯವೆಂದರೆ ಇಂದ್ರಿಯಗಳ ನಿಗ್ರಹದಮೂಲಕ,-ಬ್ರಹ್ಮನಲ್ಲಿ ಮನಸ್ಸನ್ನು
ತಿರುಗಿಸುವ ಪ್ರಯತ್ನವು ವೀರ್ಯಧಾರಣೆ ಅಥವಾ ರಕ್ಷಣೆಗಳಿಂದ ಇಂದ್ರಿಯ ನಿಗ್ರಹ
ಏರ್ಪಡುವದು. ಮತ್ತು ವೀರ್ಯದಿಂದ ಶರೀರ ರಕ್ಷಣೆಯಾಗುತ್ತದೆ. ನಾವು ತೆಗೆದು
ಕೊಳ್ಳುವ ಆಹಾರವು ಶರೀರದಲ್ಲಿ ರಸವಾಗುವದು ಆರಸದಿಂದ ರಕ್ತವೂ ರಕ್ತ
ದಿಂದ ಮಾಂಸವೂ. ಮಾಂಸದಿಂದ ಮೇಧಸ್ಸೂ. ಮೇದಸ್ಸಿನಿಂದ ಅಸ್ಥಿಯೂ
ಅಸ್ಥಿಯಿಂದ ಮಜ್ಜೆಯೂ, ಮಜ್ಜೆಯಿಂದ ವೀರ್ಯವೂ ಉತ್ಪತ್ತಿಯಾಗುವದು.
ವೀರ್ಯದ ಒಂದು ಹನಿಯು ನಲ್ವತ್ತು ಹನಿಯ ರಕ್ತದ ಸಮಾನವಾಗುವುದು
ಅಂದಮೇಲೆ ಇಂತಹ ಅಮೂಲ್ಯವಾದ ವೀರ್ಯದ ರಕ್ಷಣೆಯು ಎಲ್ಲ ಜೀವಿಗಳಿಗೂ

ಅವಶ್ಯವಿದೆ ಎಂದು ತಿಳಿದು ವೀರ್ಯದ ಬಲದಿಂದ ಮತ್ತು ಯೋಗಾಭ್ಯಾಸದ ಮೂಲಕ ಪರಶಿವನನ್ನು ಸೇರಲು ಸಾಧ್ಯ. ಇದಲ್ಲದೆ ಈ ಧಾತುವಿನ ಪೋಷಣೆಯಿಂದ ಶರೀರಕ್ಕೆ ಒಂದು ಅದ್ಭುತ ಶಕ್ತಿಯೂ, ಬರುವದು. ಕೇವಲ ಬ್ರಹ್ಮಚಾರಿಗಳೆ ಬ್ರಹ್ಮಚರ್ಯವನ್ನು ಪಾಲಿಸಬೇಕೆಂದು ತಿಳಿಯಕೂಡದು ಎಲ್ಲ ಆಶ್ರಮಗಳಲ್ಲಿ ಎಲ್ಲರೂ ಬ್ರಹ್ಮಚರ್ಯವನ್ನು ಕೈಕೊಂಡಷ್ಟು ಉತ್ತಮರಾಗಿ ಜೀವಿಸುವರು.

ಶ್ರೀರಾಮಚಂದ್ರನ ಭಕ್ತನಾದ ಆಂಜನೇಯನು ಅಸಾಧಾರಣ ಶಕ್ತಿಯನ್ನು ಸಂಪಾದಿಸಿದ್ದು ಬ್ರಹ್ಮಚರ್ಯದಿಂದಲೇ! ಇದರಿಂದ ಮಾನವನು ತನಗೆ ಅಸಾಧ್ಯವಾದ ಕೆಲಸವನ್ನು ಸುಲಭವಾಗಿ ಮಾಡಬಹುದು. ಮತ್ತು ಇದರಿಂದಲೇ ದೇಹಬಲ, ಜ್ಞಾನಬಲ. ಬ್ರಹ್ಮಚರ್ಯವನ್ನು ಪಾಲನೆ ಮಾಡತಕ್ಕವರು ದುರ್ಜನ ಸಹವಾಸ, ಕಥೆ, ಕಾದಂಬರಿಗಳ ಅಧ್ಯಯನ ಮತ್ತು ಅಶ್ಲೀಲದೃಶ್ಯ. ಸೋಮಾರಿತನ ಇವೆಲ್ಲವುಗಳನ್ನು ಅವಶ್ಯವಾಗಿ ಬಿಡಲೇ ಬೇಕು. ಯಾಕಂದರೆ ಇದರಿಂದ ಬ್ರಹ್ಮಚರ್ಯೆಯು ನಾಶವಾಗುವದು. ಕಾರಣ ಅದಷ್ಟು ದೂರವಿರುವದು ಉತ್ತಮ. ಸತ್ಪುರುಷರ ಸಹವಾಸ, ಪುರಾಣಪುಣ್ಯಕಥೆಗಳ ಶ್ರವಣ, ಭಗವಧ್ಯಾನ, ತಪಸ್ಸು, ಯೋಗಾಭ್ಯಾಸ, ಇವುಗಳಿಂದ ಬ್ರಹ್ಮಚರ್ಯವು ಸಾಧ್ಯವಾಗುವದು. **"ಬ್ರಹ್ಮಚರ್ಯವೇ ಜೀವನ ವೀರ್ಯನಾಶವೇ ಮೃತ್ಯುವೆಂಬುದನ್ನು ಎಲ್ಲರೂ ನೆನಪಿನಲ್ಲಿಡಬೇಕಾದ ಮಾತು"**

ತಪಸ್ಸಿನ ಬಗ್ಗೆ ಸ್ವಲ್ಪ ವಿಚಾರ ಮಾಡೋಣ, ಶಾರೀರಕ; ವಾಚಿಕ, ಮಾನಸಿಕ, ಎಂದು ಮೂರು ಬಗೆಯಾಗಿ ಹೇಳಲ್ಪಟ್ಟಿದೆ. ದೇವರ ಪೂಜೆ, ಗುರುಹಿರಿಯರ ಪೂಜೆ ಜ್ಞಾನಿಗಳ ಪೂಜೆ ಇವೆಲ್ಲ ಶರೀರದಿಂದ ಮಾಡುವ ತಪಸ್ಸುಗಳೆಂದು ತಿಳಿಯುವದು.

ಇನ್ನು ಉದ್ವೇಗಕರ ಮಾತುಗಳನ್ನಾಡದಿರುವುದು ಸತ್ಯವನ್ನೇ ನುಡಿಯುವದು. ಹಿತವನ್ನು ಹೇಳುವದು. ಶಾಸ್ತ್ರಾಧ್ಯಾಯನ ಮಾಡುವದು ಇವೆಲ್ಲ ವಾಕ್ ತಪಸ್ಸುಗಳು. ಅಂದರೆ ಮಾತಿನಿಂದ ಮಾಡಲ್ಪಡುವ ತಪಸ್ಸುಗಳು. ಮತ್ತು ಶಾಂತ ಮನಸ್ಸು, ಸದಾ ಒಳ್ಳೆಯದನ್ನೇ ಚಿಂತಿಸುವದು. ಆರೋಗ್ಯವಾದವುಗಳನ್ನು ಆಡದೇ ಸುಮ್ಮನಿರುವದು. ಆತ್ಮನಿಗ್ರಹ, ಮನಶ್ಶುದ್ಧಿ ಇತ್ಯಾದಿಗಳು ಮನಸ್ಸಿನಿಂದ ಮಾಡುವ ತಪಸ್ಸುಗಳು. ಆದರೆ ಕೇವಲ ಅರಣ್ಯದಲ್ಲಿ ಮೂಗು ಹಿಡಿದು ಯೋಗಾಭ್ಯಾಸ ಮಾಡುವದು ಮಾತ್ರ ತಪಸ್ಸೆಂದೂ ಅಲ್ಲದೆ ಸರ್ವರಿಗೂ ತಪಸ್ಸು ಸಂಬಂಧವಿಲ್ಲವೆಂದು ಭಾವಿಸುವದು ತಪ್ಪು. ಈ ಮೂರು ವಿಧವಾದ ತಪಸ್ಸುಗಳು ಸರ್ವರಿಗೂ ಹೇಳಲ್ಪಟ್ಟವೆ, ಮತ್ತು ಇವು ಧರ್ಮದ ಹಾದಿಯಲ್ಲಿ ಮಾನವನು ನಡೆಯುವುದಕ್ಕೋಸ್ಕರ ಸಹಕಾರಿಯಾಗಿದೆ.

ಕಡೆಯದಾಗಿ ಯೋಗದ ಬಗ್ಗೆ ಹೇಳುವದಾದರೆ, ಚಂಚಲವಾದ ಮನಸ್ಸನ್ನು ಬಿಗಿ ಹಿಡಿದು ಒಂದೇ ಧ್ಯಾನ ವಿಷಯದಲ್ಲಿ ಸ್ಥಿರವಾಗಿ ನಿಲ್ಲುವಂತೆ ಮಾಡುವದು, ಯೋಗವೆನಿಸುವದು. ಯೋಗಗಳಲ್ಲಿ ಹಠಯೋಗ, ರಾಜಯೋಗ, ಕರ್ಮಯೋಗ, ಕುಂಡಲಿನಿಯ ಯೋಗ, ಇತ್ಯಾದಿ ಯೋಗಗಳಿರುವವು. ಆದರೆ ಇವೆಲ್ಲವುಗಳಲ್ಲಿ ಶಿವಯೋಗವೇ ಶ್ರೇಷ್ಠವಾದದ್ದೆಂದು ನಮ್ಮ ಬಸವಾದಿ ಪ್ರಮಥರ ಸಮ್ಮತವಿರುವದು. ಯೋಗಸಾಧನೆಯು ನಮ್ಮವರಿಗೆ ಅನಾದಿಯಾಗಿ ಬಂದಿರುವದು. ಮತ್ತು ಹಿಂದೆ ಆಗಿಹೋದ ಮಹರ್ಷಿಗಳು, ಮಠಾಚಾರ್ಯರೂ ಇನ್ನುಳಿದ ಮಹಾತ್ಮರೂ ಸಹ, ಯೋಗ ಸಾಧನೆಯ ಮಹತ್ವವನ್ನು ಜನರಿಗೆ ತಿಳಿಯ ಪಡಿಸಿರುವರು. ಆದ ಕಾರಣ ಇಂತಹ ಯೋಗ ಸಾಧನೆಯನ್ನು ಸ್ತ್ರೀ ಪುರುಷ ಮೊದಲುಗೊಂಡು ಜನಸಾಮಾನ್ಯರೂ ಎಲ್ಲವರಿಂದ ರೂಢಿ ಮಾಡಿಕೊಂಡು ಶಾರೀರಕ ಮತ್ತು ಅಂತ ರಂಗ ಸೌಖ್ಯಗಳನ್ನು ಸಂಪಾದಿಸಬಹುದು.

ಯೋಗ ಸಾಧನೆಯಾಗ ಬೇಕಾದರೆ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳೆಂಬ ಅಷ್ಟಾಂಗಗಳೊಡನೆ ಮಾಡಿದ ಚಿತ್ತವೃತ್ತಿನಿರೋಧವು ಅವಶ್ಯಕ.

ಯಮವೆಂದರೆ ? ಇಂದ್ರಿಯಗಳನ್ನು ನಿಗ್ರಹಿಸುವದು. ಈ ಯಮವು ಅಹಿಂಸೆ ಸತ್ಯ ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ, ಹೀಗೆ ಐದುಗುಣಗಳಿಂದ ಸಾಧ್ಯ ವಾಗುವದು, ಮನಸ್ಸಿನಿಂದಾಗಲಿ, ಮಾತುಗಳಿಂದಾಗಲಿ, ಶರೀರದಿಂದಾಗಲಿ, ಕರ್ಮ ದಿಂದಾಗಲಿ, ಅಪಕಾರವನ್ನು ಮಾಡದಿರುವುದೇ ಅಹಿಂಸೆಯು,

ಇದ್ದದನ್ನು ಇದ್ದ ಹಾಗೆಯೇ ಹೇಳುವದುಸತ್ಯವು.
ತನ್ನದಲ್ಲದವಸ್ತುವನ್ನು ತೆಗೆದುಕೊಳ್ಳದಿರುವುದೇ ಅಸ್ತೇಯವು.
ಶಬ್ಧ–ಸ್ಪರ್ಶಾದಿ ವಿಷಯಸುಖಗಳನ್ನು ಬಯಸದಿರುವದೇ ಅಪರಿಗ್ರಹವು.
ಇಂದ್ರಿಯನಿಗ್ರಹವೇ ಬ್ರಹ್ಮಚರ್ಯವು.

ಎರಡನೆಯದಾಗಿ ಹೇಳಲ್ಪಟ್ಟನಿಯಮವೆಂದರೆ ? ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ, ಮತ್ತು ಈಶ್ವರ ಪ್ರಣಿಧಾಮನಗಳೆಂದು ಐದುಗುಣಗಳು ನಿಯಮಗಳು

ಶೌಚವೆಂದರೆ ? ಮಣ್ಣು, ನೀರುಗಳಿಂದ ಶರೀರದ ಹೊರಗಣ ಶುದ್ಧಿಯನ್ನೂ ಧ್ಯಾನಾದಿಗಳಿಂದ ಒಳಗಣ ಶುದ್ಧಿಯನ್ನೂ ಪಡೆಯುವುದು

ತೃಪ್ತಿಯನ್ನು ಪಡುವದೇ ಸಂತೋಷವೆಂದು ತಿಳಿಯುವುದು.
ವ್ರತೋಪಾಸಾದಿಗಳ ಮೂಲಕ ದೇಹವನ್ನು ಕೊರಗಿಸುವದೇ ತಪಸ್ಸು
ಗುರು ಮುಖದಿಂದ ಶಾಸ್ತ್ರಾಭ್ಯಾಸ ಮಾಡುವದು ಸ್ವಾಧ್ಯಾಯ
ಎಲ್ಲ ಕರ್ಮಗಳನ್ನು ಈಶ್ವರನಿಗೆ ಅರ್ಪಿಸುವದೇ ಈಶ್ವರ ಪ್ರಾಣಿಧಾನವು.

ಮೂರನೆಯದಾಗಿ ಹೇಳಿದ ಆಸನವು - ಈ ಆಸನಗಳಲ್ಲಿ ಹಲವಾರು ಭೇಧಗಳಿವೆ. ಇವುಗಳಲ್ಲಿ ಸಿಂಹಾಸನ, ಭದ್ರಾಸನ, ಪದ್ಮಾಸನ, ಸಿದ್ಧಾಸನ, ಇವುಗಳು ಪ್ರಸಿದ್ಧವಾದವುಗಳು.

ನಾಲ್ಕನೆಯದಾದ ಪ್ರಾಣಾಯಾಮವು ಇದು ರೇಚಕ, ಪೂರಕ, ಮತ್ತು ಕುಂಭಕ, ಹೀಗೆ ಮೂರು ವಿಧವಾಗಿರುವದು. ಎಡದ ಮೂಗಿನಿಂದ ದೇಹದೊಳಗಿನ ವಾಯುವನ್ನು ಹೊರಕ್ಕೆ ಬಿಡುವದು ರೇಚಕವಾಗುವದು. ಬಲದ ಮೂಗಿನಿಂದ ಹೊರಗಿನ ಶುದ್ಧಿ ವಾಯುವನ್ನು ಒಳಗೆ ಎಳೆದುಕೊಳ್ಳುವದು ಪೂರಕವು ಮತ್ತು ತನ್ನ ದೇಹದಲ್ಲಿರುವ ವಾಯುವನ್ನು ಹೊರಗೆ ಬಿಡದೆ ನಿಗ್ರಹಿಸುವದು ಕುಂಭಕವಾಗುವದು.

ಐದನೆಯದಾದ ಪ್ರತ್ಯಾಹಾರವು ಇದು ರೂಪ ರಸ ಗಂಧ ಸ್ಪರ್ಶಶಬ್ಧಗಳೆಂಬ ವಿಷಯಗಳಿಗೆ ಇಂದ್ರಿಯಗಳನ್ನು ಅಧೀನ ಮಾಡದಿರುವದಕ್ಕೆ ಪ್ರತ್ಯಾಹಾರವೆಂದು ಹೆಸರು.

ಆರನೆಯದಾಗಿ ಹೇಳಿದ ಧ್ಯಾನವು ಅಂದರೆ ಅನನ್ಯಮನಸ್ಸಿನಿಂದ ಇಷ್ಟವಸ್ತುವಿನಲ್ಲಿ ಇಷ್ಟರುವ ಲಕ್ಷವು ಧ್ಯಾನವೆನಿಸುವದು.

ಏಳನೆಯದಾದ ದಾರಣವು ಹೃದಯ ಮತ್ತು ನಾಸಿಕ ತುದಿಯಲ್ಲಿ ಮನಸ್ಸನ್ನು ತಡೆಯುವದಾಗಿದೆ.

ಏಂಟನೆಯದಾದ ಸಮಾಧಿಯು ಧ್ಯಾನ ಮಾಡತಕ್ಕವನು ಧ್ಯಾನ ವಸ್ತುವು ಮತ್ತು ಧ್ಯಾನಕ್ರಿಯೆ ಎಂಬ ಮೂರು ಬಗೆಯ ಅರಿವಿಲ್ಲದ ಅಸಾಧಾರಣ ಸ್ಥಿತಿಯ ಧ್ಯಾನವೇ ಸಮಾಧಿಯು.

(ಮುಂದುವರಿಯುತ್ತದೆ)

---

## ಶ್ರದ್ಧಾಂಜಲಿ

ಶ್ರೀ ಸಿದ್ಧಗಂಗಾ ತಾಂತ್ರಿಕ ಶಿಕ್ಷಣ ಸಂಸ್ಥೆಯಲ್ಲಿ ಮೆಕಾನಿಕಲ್ ಎಂಜಿನಿಯರಿಂಗ್ ವಿಭಾಗದಲ್ಲಿ ಅಧ್ಯಾಪಕರಾಗಿದ್ದ ಶ್ರೀ ಮುನಿರುದ್ದೀನ್‌ರವರ ನಿಧನಕ್ಕೆ **'ಸಿದ್ಧಗಂಗಾ'** ಸಂತಾಪವನ್ನು ವ್ಯಕ್ತಪಡಿಸುತ್ತಾ, ದಿವಂಗತರ ಆತ್ಮಕ್ಕೆ ಬಸವಾದಿ ಪ್ರಮಥರು ಶಾಂತಿಯನ್ನು ಕರುಣಿಸಲೆಂದೂ, ದಿವಂಗತರ ಬಂಧುಗಳಿಗೆ ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ನೀಡಲೆಂದೂ ಪ್ರಾರ್ಥಿಸುತ್ತದೆ.

# ಕನ್ನಡ ಸಾಹಿತ್ಯ-ಸಂಸ್ಕೃತಿ ಮತ್ತು ಸಂಶೋಧನ ಕ್ಷೇತ್ರದ ದಿಗ್ಗಜಯುಗಳಲ್ಲಿ ಒಂದಾಗಿದ್ದ.

**ಶ್ರೀ ಹೆಚ್. ದೇವೀರಪ್ಪನವರ ಕಣ್ಮರೆ**

ದಾವಣಗೆರೆಯಲ್ಲಿ ಜೂನಿಯರ್ ಇಂಜನಿಯರ್‌ಆಗಿ ಕೆಲಸ ಮಾಡುತ್ತಿರುವ ಪ್ರೀತಿಯ ಮಗ 'ನಾಗೇಶ್' ಮತ್ತು ಮೊಮ್ಮಗ–ಸೊಸೆ, ಹಿರಿಯಮಗಳು–ಅಳಿಯ ದಿರನ್ನು ನೋಡಿಕೊಂಡು ಬರಲೆಂದು ಹೋಗಿ, ಹೋದ ಮೂರುದಿನಗಳಲ್ಲೇ ಹೃದಯಾ ಘಾತಕ್ಕೊಳಗಾಗಿ ದಿನಾಂಕ 3-1-1988ನೆಯ ಭಾನುವಾರ ಮಧ್ಯಾಹ್ನ 12-3೦ಕ್ಕೆ ಲಿಂಗೈಕ್ಯರಾದ ಸಾಹಿತಿ, ಸಂಶೋಧಕ, ಸಹೃದಯ, ಪ್ರಾಮಾಣಿಕ, ಕಾಯ ಸದ್ಯಾದಿ ಶ್ರೀ ಹೆಚ್. ದೇವೀರಪ್ಪನವರ ಕಣ್ಮರೆಯಿಂದ ಕನ್ನಡ ಸಾಹಿತ್ಯ ಸರಸ್ವ ಓರ್ವ ಶ್ರದ್ಧಾವಂತ ಪುತ್ರನನ್ನು ಕಳೆದುಕೊಂಡಂತಾಗಿದೆ.

"ತೀರ್ಥರಾಮೇಶ್ವರ" ಎಂಬುದು ಹೊನ್ನಾಳಿ ತಾಲ್ಲೂಕಿನಲ್ಲಿ ಒಂದು ಪರ್ವತ ಸಾಲಿನ ದಟ್ಟ ಅರಣ್ಯ ಮಧ್ಯದ ಸೊಬಗಿನ ಸ್ಥಾನ. ಅದರ ಉತ್ತರಭಾಗ ಬೆಳ ವೊಲದ ಫಲವತ್ತಾದ ಭೂಭಾಗ. ಮಲೆ-ಬೆಳುವೊಲಗಳ ಗಡಿನಾಡಿನಲ್ಲಿ 'ಮುಸ್ಲಿಗೇನ ಹಳ್ಳಿ' ವ್ಯವಸಾಯ ಪ್ರಧಾನ ಕಿರುವಳ್ಳಿ. 'ಮನೆನೋಡಾ ಬಡವರು–ಮನನೋಡಾ ಘನಮನ ಸಂಪನ್ನರು" ಎಂಬಂತಿದ್ದ ಅಪ್ಪಟ ವ್ಯವಸಾಯ ಕಾಯಕನಿರತ 'ತೀರ್ಥಪ್ಪ 'ಸಾವಿತ್ರಮ್ಮ' ದಂಪತಿಗಳ ಹಿರಿಯ ಪುತ್ರನಾಗಿ ೧೯೧೨ ನೆಯ ಇಸವಿಯಲ್ಲಿ ಜನ ವೆತ್ತಿದ ಹಕ್ಕೀಕಟ್ಟೆ (ಹೆಚ್) ದೇವೀರಪ್ಪನವರು ಬಾಲ್ಯದಿಂದಲೂ ಭಾವನಾ ಜೀವಿ ಮಲೆನಾಡು–ಬೆಳವಲನಾಡಿನ ಪ್ರಕೃತಿಯ ಮಡಿಲಲ್ಲಿ ವಿಹರಿಸಿ ಬೆಳೆದು, ಅನೇಕ ಪಕೃತಿ ಚಿತ್ರ, ಜನಜೀವನ ಚಿತ್ರ, ಸಂಸ್ಕಾರ ಸಂಪನ್ನ ಮನೋಬುದ್ಧಿಗಳುಳ್ಳವರೆಂಬುದನ್ನು ಕಳೆದ 41 ವರ್ಷ ಗಳಷ್ಟು ದೀರ್ಘಕಾಲ ದಿಂದಲೂ ಒಂದಿಲ್ಲೊಂದು ರೀತಿಯಲ್ಲಿ ಅವರ ಸಂಪರ್ಕಹೊಂದಿದ್ದ ನಾನು ಅವರು ಹೇಳಿದ್ದ ಮಾತುಗಳಿಂದ ಮತ್ತು ಒಡ ನಾಟದ ಅನುಭವ ವಿಶೇಷದಿಂದ ಉಲ್ಲೇಖಿಸುತ್ತಿದ್ದೇನೆ. ಇಷ್ಟೇ ಅಲ್ಲ; ಈ ಮಾತಿಗೆ ಜೀವಂತ ನಿದರ್ಶನವಾಗಿ ಶ್ರೀಯುತರು ಬರೆದು ಎರಡುಸಲ ಮುದ್ರಣಗೊಂಡು ಇತ್ತೀ ಚೆಗೆ ಸಿನಿಮಾ ಉದ್ಯಮಿಗಳ ದೃಷ್ಟಿಗೂ ಬಿದ್ದ ಅತ್ಯುತ್ತಮ ಕಾದಂಬರಿ " ಬೆಳು ವಲದ ಮಡಿಲಲ್ಲಿ" ಈ ಎಲ್ಲ ಅಂಶಗಳನ್ನೂ ಲೋಕಕ್ಕೆ ಬಾಯಿಬಿಟ್ಟು ಹೇಳುತ್ತದೆ.

ನಿಂತ ನೆಲದ ಗುಣ ವ್ಯಕ್ತಿಯನ್ನು ನಿರ್ಮಿಸುವಲ್ಲಿ ಅತ್ಯಂತ ಪ್ರಭಾವಪೂರ್ಣ ಸರಕು. ದೇವೀರಪ್ಪನವರು ಹುಟ್ಟು ಪ್ರಾಮಾಣಿಕ ವ್ಯಕ್ತಿ; ನ್ಯಾಯ ನಿಷ್ಠುರಿ ಚಿಂತನ ಶೀಲ ವ್ಯಕ್ತಿ. ಸ್ವಲ್ಪ ಮಟ್ಟಿಗೆ ಮಾತು ಹೆದೆಯಿಂದ ಚಿಮ್ಮಿಹರಿದ ಬಾಣದಂತೆ

ಸೇರ. ಆದ್ದರಿಂದ ಕಠಿಣ; ಹೃದಯ ಮಾರ್ದವದ್ದು. ಮನಸ್ಸು ವಿವೇಕದ್ದು. ಈ ಗುಣಗಳು ಅವರಿಗೆ ನಿಂತ ನೆಲದ ಗುಣದಿಂದ ಲಭ್ಯವಾದ ವರಗಳು ಎನ್ನ ಬಹುದಾಗಿದೆ.

ಏನ. ಓದಬೇಕು ! ಯಾಕೆ ಓದಬೇಕು! ಓದಿನ ಗುರಿಯೇನು-ಎಂಬುದೊಂದೂ ಗೊತ್ತಿಲ್ಲದೆ ಹತ್ತರೊಡನೆ ಹನ್ನೊಂದಾಗಿ ಮಾಮೂಲಿ ಓದನ್ನು ಪ್ರಾರಂಭಿಸಿದ ಶ್ರೀಯುತರು ಲೋವರ್ ಸೆಕೆಂಡರಿ ನಂತರ ಶಿವಮೊಗ್ಗ ನಾರ್ಮಲ್ ಸ್ಕೂಲಿನಲ್ಲಿ ಅಪ್ಪರ್ ಸೆಕೆಂಡರಿ ಓದಲು ಪ್ರಾರಂಭಿಸಿದಾಗಲೇ ವ್ಯಾಕರಣ, ಅಲಂಕಾರ-ಛಂದಸ್ಸು ಮತ್ತು ಪ್ರೌಢ ಕಾವ್ಯಾಭ್ಯಾಸದ ರುಚಿ ತಗುಲಿತು. ಆ ರುಚಿಯು ಬೆನ್ನು ಹತ್ತಿ ಬೆಂಗ-ಳೂರು ಮೈಸೂರುಗಳಲ್ಲಿ ವಿದ್ಯಾಭ್ಯಾಸ ಲಾಲಸೆಯಿಂದ ಸುತ್ತಾಡ ತೊಡಗಿದಾಗ ಇವರ ಸುಪ್ತ ಪ್ರತಿಭೆಯ ಮದ್ದಿನ ಮನೆಗೆ ಕಿಚ್ಚಿಟ್ಟು ಸ್ಫೋಟಗೊಳ್ಳುವಂತೆ ಮಾಡಿ-ದವರೇ ಹೆಸರಾಂತ ಉಪಾಧ್ಯಾಯರೆಂದು ಕೀರ್ತಿವೆತ್ತಿದ್ದ ಎ. ಆರ್. ಕೃಷ್ಣಶಾಸ್ತ್ರಿಗಳು ಬಿ ಎಂ. ಶ್ರೀ, ಡಿ. ಎಲ್. ಎನ್. ಮೊದಲಾದ ಅಧ್ವರ್ಯುಗಳು. ಬಿ. ಎಂ. ಶ್ರೀಯವರು ಆಗಾಗ ಭಾವಪೂರ್ಣವಾಗಿ ಹೇಳುತ್ತಿದ್ದ ‘ಅತಿ ಸರ್ವತ್ರ ವರ್ಜಯೇತ್’ ಎಂಬ ಮಾತನ್ನು ಕೊನೆಯವರೆಗೂ ಪದೇ ಪದೇ ಹೇಳಿಕೊಂಡು ಮೆಲಕು ಹಾಕುತ್ತಿದ್ದರು.

ತಮ್ಮ ಗುರುವರ್ಗದವರ ಪ್ರತಿಭೆ, ಕರ್ತವ್ಯ ಕೌಶಲ್ಯ, ವಿದ್ವತ್ತುಗಳಿಗೆ ಮಾರು ಹೋದ ದೇವೀರಪ್ಪನವರು ತಮ್ಮನ್ನು ತಾವು ರೂಪಿಸಿಕೊಂಡು ಸಂಶೋಧನ ಕ್ಷೇತ್ರದಲ್ಲಿ ಬೆಳೆದು ಬದುಕ ಬೇಕೇಂದು ನಿರ್ಧರಿಸಿ, ಸ್ನಾತಕೋತ್ತರ ಪದವಿ ಪಡೆದ ನಂತರ ಮೈಸೂರಿನಲ್ಲಿ ಅರಮನೆ ಮತ್ತು ಸರಕಾರಗಳು ಬಹುಮಮತೆಯಿಂದ ಸಾಕಿ ಬೆಳೆಸಿದ್ದ ಸರಸ್ವತೀ ಮಂದಿರ “ ಪ್ರಾಚ್ಯ ಸಂಶೋಧನಾ ಸಂಸ್ಥೆ ” ( ಓರಿಯಂಟಲ್ ರೀಸರ್ಚ ಇನ್‌ಸ್ಟಿಟ್ಯೂಟ್ ) ಗೆ ತಮನ್ನು ತಾವು ಅರ್ಪಿಸಿಕೊಂಡು ಬಿಟ್ಟರು. ಅಖಂಡ ಸುಮಾರು ಮೂವತ್ತು ವರ್ಷಕಾಲ ಚಿಕ್ಕಹುದ್ದೆಯಿಂದ ಕೊನೆಗೆ ಸಂಸ್ಥೆಯ ನಿರ್ದೇಶಕರಾಗಿ ಸೇವೆ ಸಲ್ಲಿಸಿ ನಿವೃತ್ತರಾದುದೊಂದು ದೊಡ್ಡ ಇತಿಹಾಸ: ಈ ಕಾಲದಲ್ಲಿ ಬಹು ಮೂಲಕ ಹಸ್ತಪ್ರತಿಗಳ ಸಂಗಹ್ರವಾದುದಲ್ಲದೆ, ದೊಡ್ಡ ಸಂಖ್ಯೆಯಲ್ಲಿ ಕೃತಿಗಳು ಆ ಸಂಸ್ಥೆಯಿಂದ ಹೊರಬಂದುವೆಂದು ಹೇಳಲಾಗುತ್ತಿದೆ.

ಈ ಸಂಸ್ಥೆಯಲ್ಲಿ ಕೆಳಹಂತದಿಂದ ಮೇಲೇರಿ ಹೋದ ಶ್ರೀಯುತರಿಗೆ ಅದರ ಸಂದಿಗೊಂದಿಯ ಕೀಲು ಕೀಲಿನ ಪರಿಚಯ ಮಾಡಿಕೊಂಡವರು. ನಿಪುಣ ವೈಣಿಕನಂತೆ ಸಂಸ್ಥೆಯೆಂಬ ವೀಣೆಯನ್ನು ಬಹು ಸಿಸ್ತಿನಿಂದ ನುಡಿಸಿ, ಅಲ್ಲಿನ ತಮ್ಮ ಕೈ ಕೆಳಗಿನ ಕಿರಿಯ ಸಂಶೋಧಕರಿಗೆ ಹೆಜ್ಜೆ ಹೆಜ್ಜೆಗೂ ಸೂಕ್ತ ಮಾರ್ಗದರ್ಶನ ಮಾಡುತ್ತ ಅನೇಕ ಮೂಲಕ ಹೊರ ಬರುವಂತೆ ಮಾಡಿ, ಹಿಂದಿನಿಂದ ನಡೆದು ಬಂದ ಆ ಸಂಸ್ಥೆಯ ದಾಖಲೆಗಳನ್ನು ಮುರಿದರೆಂದು ಹೇಳಲಾಗುತ್ತಿದೆ.

( ಮುಂದುವರೆಯುತ್ತದೆ)

ಓಂ

ಶ್ರೀ ಗುರುಬಸವ ಲಿಂಗಾಯನಮಃ





## ತುಮಕೂರು ತಾಲ್ಲೂಕು ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ

# ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ

## ನಿರೂಪ

ಸಃಸಾವಿರದ ಒಂಬೈನೂರ ಎಂಭತ್ತೆಂಟನೇಯಿಸ್ವಿ ಮಾರ್ಚಿ ತಿಂಗಳು ಮೂವತ್ತೊಂದನೇ ಗುರುವಾರ ( ದಿನಾಂಕ 31-3-1988 ) ತುಮಕೂರು ತಾಲ್ಲೂಕು ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀ ಶಿವಕುಮಾರ ಸ್ವಾಮಿ-ಗಳವರಾದ ನಾವು ನಮ್ಮಿಂದ ದಿನಾಂಕ 21-5-1975 ರಲ್ಲಿ ಶ್ರೀ ಸಿದ್ಧಗಂಗಾ ಮಠಕ್ಕೆ ನಮ್ಮ ಉತ್ತರಾಧಿಕಾರಿಯಾಗಿ ನೇಮಕಗೊಂಡಿದ್ದ ಶ್ರೀ ಗೌರೀಶಂಕರ ಸ್ವಾಮಿಗಳನ್ನು ಉತ್ತರಾಧಿಕಾರಿ ಸ್ಥಾನದಿಂದ ವಜಾಮಾಡಿ ತೆರವಾದ ಸ್ಥಾನದಲ್ಲಿ ಮಾಗಡಿ ತಾಲ್ಲೂಕು ಕಂಚುಕಲ್ಲು ಬಂಡೇಮಠದ **ಕೈ|| ಶ್ರೀ ಸದಾಶಿವಯ್ಯ-ನವರ ಮತ್ತು ಶ್ರೀಮತಿ ಶಿವರುದ್ರಮ್ಮನವರ ಮಗ ಶ್ರೀ ಬಿ. ವಿಶ್ವನಾಥ ಎಂಬ ವಟುವಿಗೆ** ಶ್ರೀ ಸಿದ್ಧಗಂಗಾ ಮಠದಲ್ಲಿ ದಿನಾಂಕ 29-1-1988 ರ ಶುಕ್ರವಾರದಂದು ನಾವೇ ಸ್ವತಃ ಶಾಸ್ತ್ರೋಕ್ತವಾಗಿ ಜಂಗಮ ದೀಕ್ಷೆ ಬ್ರಹ್ಮೋಪ-ದೇಶ ಪೂರ್ವಕ ವಿರಕ್ತಾಶ್ರಮವನ್ನನುಗ್ರಹಿಸಿ **ಶ್ರೀ ಸಿದ್ದಲಿಂಗ ಸ್ವಾಮಿಗಳೆಂದು** ನಾಮಕರಣ ಮಾಡಿರುವ **ಸದರೀ ಶ್ರೀ|| ನಿ|| ಪ್ರ|| ಸ್ವ|| ಶ್ರೀ ಸಿದ್ದಲಿಂಗ-ಸ್ವಾಮಿಗಳವರನ್ನು ನೆರೆದಿರುವ** ಮಠಾಧೀಶ್ವರರ, ಹರಗುರು ಚರಮೂರ್ತಿಗಳ ಸಮಾಜ ಬಾಂಧವರ, ಭಕ್ತಾದಿಗಳ, ಅಭಿಮಾನಿಗಳ ಹಾಗೂ ಸಾರ್ವಜನಿಕರ ಸಮ್ಮುಖದಲ್ಲಿ **ಶ್ರೀ ಸಿದ್ಧಗಂಗಾ ಮಠಕ್ಕೆ ನಮ್ಮ ಉತ್ತರಾಧಿಕಾರಿಯನ್ನಾಗಿ ವಿಧಿವತ್ತಾಗಿ ನೇಮಕ ಮಾಡುತ್ತೇವೆ.** ಈ ದಿನದಿಂದಲೇ **ಶ್ರೀ|| ನಿ|| ಪ್ರ|| ಸ್ವ|| ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರು** ನಮ್ಮ ಉತ್ತರಾಧಿಕಾರಿಗಳಾಗಿ ಶ್ರೀ ಸಿದ್ಧಗಂಗಾ ಮಠದಲ್ಲಿ ಮುಂದುವರಿಯುತ್ತಾರೆ.

ಶ್ರೀ ಸಿದ್ಧಗಂಗಾ ಮಠ

ದಿನಾಂಕ: **31-3-1988**

ಗುರುವಾರ

**ಶ್ರೀ ಶಿವಕುಮಾರ ಸ್ವಾಮಿಗಳು.**

# ಪ್ರಕಟಣೆ

ಶ್ರೀ ಶಿವಕುಮಾರ ಸ್ವಾಮಿಗಳು. ದಿನಾಂಕ 31ನೇ ಮಾರ್ಚಿ 1988

ಶ್ರೀ ಸಿದ್ಧಗಂಗಾ ಮಠ

ತುಮಕೂರು ಜಿಲ್ಲೆ.

ಶ್ರೀ ಸಿದ್ಧಗಂಗಾ ಮಠವು ಪವಿತ್ರ ಪರಂಪರೆಯುಳ್ಳ ಪುರಾತನ ಮಠವಾಗಿದ್ದು ಶಿವಯೋಗ ಸಂಪನ್ನರೂ, ಪೂಜಾ ನಿಷ್ಠರೂ, ಸಚ್ಚಾರಿತ್ರವುಳ್ಳವರೂ ಅಖಂಡ ಬ್ರಹ್ಮಚಾರಿಗಳೂ, ಆಚಾರನಿಷ್ಠರೂ, ದಾಸೋಹ ಭಾವ ಸಂಪನ್ನರೂ, ಸೇವಾನಿಷ್ಠರೂ ಆದ ಮಠಾಧಿಪತಿಗಳನ್ನು ಪರಂಪಾರಾನುಗತವಾಗಿ ಹೊಂದಿರುವುದು ಲೋಕವಿದಿತವಾಗಿದೆ. ಇಂತಹ ಶ್ರೀ ಮಠಕ್ಕೆ ನಾವು 1930ರಲ್ಲಿ ನಮ್ಮ ಪೂಜ್ಯ ಗುರುಗಳಾದ ಶ್ರೀ ಉದ್ದಾನ ಶಿವಯೋಗಿಗಳವರಿಂದ ಶ್ರೀ ಮಠಕ್ಕೆ ಉತ್ತರಾಧಿಕಾರಿಯಾಗಿ ನೇಮಕಗೊಂಡು ಅವರ ಸೇವೆ ಮಾರ್ಗದರ್ಶನ ಶಿಕ್ಷಣವನ್ನು ವಿಧೇಯತೆಯಿಂದ ಪಾಲಿಸಿ ಅವರ ಅನುಗ್ರಹ ಪೂರ್ವಕ ಕೃಪಾಶೀರ್ವಾದ ಮತ್ತು ಕೃಪಾಕಟಾಕ್ಷಕ್ಕೆ ಪಾತ್ರರಾಗಿ ಅವರು ಲಿಂಗೈಕ್ಯರಾದ ನಂತರ 1941 ರಿಂದ ಶ್ರೀ ಮಠದ ಮಠಾಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡು ಶ್ರೀಮಠವನ್ನು ಬೃಹತ್ ಪ್ರಮಾಣದಲ್ಲಿ ಬೆಳೆಸಿ ಅನೇಕ ಶಿಕ್ಷಣ ಸಂಸ್ಥೆಗಳನ್ನು ಕಟ್ಟಿ ಬೆಳೆಸಿ ಕೊಂಡು ಬಂದಿರುತ್ತೇವೆ. ಇಂತಹ ಶ್ರೀ ಮಠಕ್ಕೆ ನಮ್ಮ ಉತ್ತರಾಧಿಕಾರಿಯನ್ನಾಗಿ ದಿನಾಂಕ 21-5-1975ರಲ್ಲಿ ಶ್ರೀ ಗೌರೀಶಂಕರ ಸ್ವಾಮಿಗಳನ್ನು ನೇಮಕ ಮಾಡಿ ಕೊಂಡೆವು.

ಅವರನ್ನು ಉತ್ತರಾಧಿಕಾರಿಯಾಗಿ ನಿಯೋಜಿಸುವಾಗ ಅವರು ಸಂಸ್ಕೃತ, ಸಾಹಿತ್ಯ, ವೇದಾಂತ ದರ್ಶನ ಶಾಸ್ತ್ರ, ವಚನ ಸಾಹಿತ್ಯಗಳಲ್ಲಿ ಉತ್ತಮ ಪಾಂಡಿತ್ಯ ಗಳಿಸಲೆಂಬ ಇಚ್ಛೆಯಿದ ಅಧ್ಯಯನಕ್ಕೆ ಸಕಲ ಸೌಲಭ್ಯಗಳನ್ನು ಒದಗಿಸಿಕೊಟ್ಟೆವು. ನಮ್ಮ ಮಾರ್ಗದರ್ಶನದಲ್ಲಿ ಲಿಂಗಪೂಜಾ ನಿಷ್ಠೆ, ಆಚಾರನಿಷ್ಠೆ' ಸದ್ವರ್ತನೆ' ಸದಾಚಾರ, ವಿಧೇಯತೆ, ಸೇವಾನಿಷ್ಠೆ, ದಾಸೋಹ ಪ್ರಿಯತೆ ಪಾವಿತ್ರ್ಯತೆ ಮತ್ತು ಪೂಜ್ಯತೆಯುಳ್ಳವರಾಗುವರೆಂದು ಮತ್ತು ಶ್ರೀ ಮಠದಲ್ಲಿ ಪರಂಪರಾಗತವಾಗಿ ಬಂದ ಸೇವಾವೃತ್ತಿ, ತ್ರಿವಿಧ ದಾಸೋಹ, ವಿದ್ಯಾಭಿವೃದ್ಧಿ ಅನಾಥ ರಕ್ಷಣೆಗಳಲ್ಲಿ ಆಸಕ್ತಿ ತೋರಿ ಸೇವಾ ಮನೋಭಾವನೆಯನ್ನು ಬೆಳೆಯಿಸಿಕೊಂಡು ಹೋಗುವರೆಂದು ಸದಭಿಪ್ರಾಯ ಮತ್ತು ಸದ್ಭಾವನೆ, ಯುಳ್ಳವರಾಗಿದ್ದೆವು. ಅವರ ಉತ್ತರಾಧಿಕಾರದ ನಂತರ ಎರಡು ವರ್ಷಗಳ ಕಾಲ ಅವರನ್ನು ನಮ್ಮ ಜೊತೆಯಲ್ಲಿಯೇ ಇಟ್ಟುಕೊಂಡು ಅವರಿಗೆ ಆಚಾರ ವಿಚಾರ ಲಿಂಗ ಪೂಜಾ ನಿಷ್ಠೆ ಮಾರ್ಗದರ್ಶನ ಮಾಡಿದ್ದೆವು. ಜೊತೆಗೆ ಅವರನ್ನು ಉನ್ನತ ಪಂಡಿತರನ್ನಾಗಿ ಮಾಡಲು ವಿದ್ಯಾಭ್ಯಾಸಕ್ಕಾಗಿ ವಿಶೇಷ ಸೌಲಭ್ಯ ಮತ್ತು

ವ್ಯವಸ್ಥೆಗಳನ್ನು ಮಾಡಿಕೊಟ್ಟಿದ್ದೆವು. ಅದೇ ರೀತಿ ಕ್ರಮೇಣ ಶ್ರೀ ಮಠದ ವ್ಯವಹಾ
ಮತ್ತು ದೈನಂದಿನ ಕೈಂಕರ್ಯಗಳಲ್ಲಿ ತೊಡಗಿಸಲು ಅವಕಾಶಗಳನ್ನು ಕಲ್ಪಿಸಿಕೊ
ದ್ದೆವು, ಅವರ ನಡತೆ ಮತ್ತು ವ್ಯವಹಾರಗಳಲ್ಲಿ ಲೋಪದೋಷಗಳು ಕಂಡು ಬಂದಾ
ಮೌಖಿಕವಾಗಿಯೂ, ಕೆಲವು ವೇಳೆ ಲಿಖಿತವಾಗಿಯೂ ಮಾರ್ಗದರ್ಶನಗಳನ್ನು ಮಾ
ದ್ದೆವು. ಇವರ ಜೊತೆಗೆ ಶ್ರೀ ಮಠದ ಅಭಿಮಾನಿಗಳಿಂದ ಭಕ್ತರುಗಳಿಂದ ಆಗ
ದಾಗ್ಗೆ ಹಿತವಚನಗಳನ್ನು ಹೇಳಿಸಿದ್ದೆವು. ಅನೇಕ ಪೂಜ್ಯ ಮಠಾಧಿಪತಿಗಳಿಂದಲ
ಮತ್ತು ಗಣ್ಯ ವ್ಯಕ್ತಿಗಳಿಂದಲೂ ಅವರಿಗೆ ಆಗಿಂದಾಗ್ಗೆ ಬುದ್ಧಿವಾದವನ್ನು ಹೇಳಿಸಿದೆ
ಶ್ರೀ ಮಠದಲ್ಲಿಯೂ ಸಹ ಅವರಿಗೆ ಎಲ್ಲ ರೀತಿಯ ಸೌಲಭ್ಯಗಳನ್ನು ವ್ಯವಸ್ಥೆಗಳನ
ಮಾಡಿಕೊಟ್ಟೆವು. ಆದರೆ ಅವರನ್ನು ಸಚ್ಚಾರಿತ್ರ್ಯವುಳ್ಳ, ದಕ್ಷರಾದ ಶಿವಯೋಗ ನಿ
ರಾದ, ಲಿಂಗ ಪೂಜಾನಿಷ್ಠರಾದ ಒಳ್ಳೆಯ ಆಚಾರ ವಿಚಾರವುಳ್ಳ ಅಖಂಡ ಬ್ರಹ್ಮಚಾ
ಯಾದ ಮತ್ತು ಶ್ರೀ ಮಠದ ಪವಿತ್ರ ಪರಂಪರೆಯನ್ನು ಉಳಿಸಿ ಮತ್ತು ಬೆಳೆಯಿಸಿಕೊಂಡ
ಶ್ರೀ ಮಠಕ್ಕೆ ನಮ್ಮ ನಂತರ ಯೋಗ್ಯ ಮಠಾಧಿಕಾರಿಯನ್ನಾಗಿ ಅವರನ್ನು ಮಾ
ಬೇಕೆಂಬ ನಮ್ಮ ಪ್ರಯತ್ನಗಳು, ಅವರ ಉದಾಸೀನತೆ, ಅವಿಧೇಯತೆ, ಕ್ರೌರ್ಯ
ದುಷ್ಟಸಹವಾಸ ದುರ್ನಡತೆ, ಅಶ್ರದ್ಧೆ, ಗುಂಡಾವೃತ್ತಿ ಮತ್ತು ಅನೈತಿಕತೆಗಳಿಂ
ವಿಫಲವಾದವು.

ಅವರ ಮೇಲಿನ ಗುರುತರವಾದ ಆಪಾದನೆಗಳಿಗೆ ಸಮಜಾಹಿಷಿ ಕೇಳಿ ದಿನಾಂ
9-4-1987ರಂದು ಮತ್ತು 28-2-1988 ರಂದು ಪತ್ರಗಳನ್ನು ಬರೆದಿದ್ದೆವು. ಅವರ
ನಮ್ಮ ದಿನಾಂಕ 9-4- 1987ರ ಪತ್ರಕ್ಕೆ ಮಾತ್ರ ದಿನಾಂಕ 15-4-1987ರಂದ
ಉತ್ತರ ಕೊಟ್ಟಿರುತ್ತಾರೆ. ಆ ಉತ್ತರಗಳನ್ನು ಸಾಕಷ್ಟು ಸಮಯ ತೆಗೆದುಕೊಂಡ
ಪರಿಶೀಲಿಸಿ ಯುಕ್ತಾಯುಕ್ತತೆಗಳನ್ನು ಚಿಂತನೆ ಮಾಡಿ, ಶ್ರೀ ಮಠದ ಪುರೋಭಿವೃದ್ಧಿಯ
ಮತ್ತು ಅಸ್ತಿತ್ವದ ದೃಷ್ಟಿಯಿಂದ ಸಮಾಜದ ಹಿತದೃಷ್ಟಿಯಿಂದ ಶ್ರೀ ಗೌರಿ
ಶಂಕರ ಸ್ವಾಮಿಗಳು ತಮ್ಮ ಶಿಷ್ಯರಾಗಿ ಮುಂದುವರಿಯಲು ಅನರ್ಹರೆಂದು ತೀರ್ಮಾ
ನಿಸಿ ಅವರನ್ನು ಶ್ರೀ ಮಠಕ್ಕೆ ನಮ್ಮ ಉತ್ತರಾಧಿಕಾರಿ ಸ್ಥಾನದಿಂದ ವಜಾ ಮಾಡಿರ
ತ್ತೇವೆ. ಈ ಬಗ್ಗೆ ಸವಿಸ್ತಾರವಾದ ನಿರೂಪವನ್ನು ದಿನಾಂಕ 31.3.1988 ರಂದ
ಹೊರಡಿಸಿರುತ್ತೇವೆ ಮತ್ತು ಅವರ ಜಾಗದಲ್ಲಿ ನಾವೇ ದಿನಾಂಕ 29.1.1988
ಶುಕ್ರವಾರ ಶ್ರೀ ಸಿದ್ಧಗಂಗಾ ಮಠದಲ್ಲಿ ಬೆಂಗಳೂರು ಜಿಲ್ಲಾ, ಮಾಗಡಿ
ತಾಲ್ಲೂಕು ಕಂಚುಗಲ್ಲು ಬಂಡೇ ಮಠದ ಲಿಂಗೈಕ್ಯ ಶ್ರೀ ಸದಾಶಿವಯ್ಯ ಮತ್ತು
ಶ್ರೀಮತಿ ಶಿವರುದ್ರಮ್ಮನವರ ಸುಪುತ್ರ ಚಿ॥ ವಿಶ್ವನಾಥ ಎಂಬ ವಟುವಿಗೆ
ಜಂಗಮ ಸಾಕ್ಷಿಯಾಗಿ ಷಟಸ್ಥಲ ಬ್ರಹ್ಮೋಪದೇಶಪೂರ್ವಕ ಚರಪಟ್ಟಾಧಿಕಾ
ವಿರಕ್ತಾಶ್ರಮವನ್ನು ಅನುಗ್ರಹಿಸಿ ನಿರಂಜನ ಪ್ರಣವ ಸ್ವರೂಪಿ ಶ್ರೀ ಸಿದ್ಧಲಿಂಗ
ಸ್ವಾಮಿಗಳೆಂದು ನೂತನ ಅಭಿದಾನದಿಂದ ನಾವು ಆಶೀರ್ವದಿಸಿರುವ ಶ್ರೀ ನಿರಂಜನ

ಪ್ರಣವ ಸ್ವರೂಪಿ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರನ್ನು ಶ್ರೀ ಸಿದ್ಧಗಂಗಾ ಮಠಕ್ಕೆ ನಮ್ಮ ನೂತನ ಉತ್ತರಾಧಿಕಾರಿಯಾಗಿ ಮಾಡಿಕೊಂಡಿರುತ್ತೇವೆ.

ಶ್ರೀ ಗೌರೀಶಂಕರ ಸ್ವಾಮಿಗಳವರಿಂದ ನಮಗೆ ಮತ್ತು ಮಠಕ್ಕೆ ಹಾಗೂ ಸಮಾಜಕ್ಕೆ ಎಷ್ಟೇ ಕಷ್ಟ ನಷ್ಟಗಳಾದರೂ ಮಾನವೀಯತೆಯ ದೃಷ್ಟಿಯಿಂದ ಅವರ ಜೀವನಾಂಶಕ್ಕೆ ತಿಂಗಳೊಂದಕ್ಕೆ ರೂ 3,000-00 (ಮೂರು ಸಾವಿರ ರೂಪಾಯಿಗಳು ಗಳಂತೆ ಶ್ರೀ ಮಠದವತಿಯಿಂದ ಕೊಡುತ್ತೇವೆ. ಅವರನ್ನು ಉತ್ತರಾಧಿಕಾರಿತನದಿಂದ ವಜಾ ಮಾಡಿರುವ ಆದೇಶವನ್ನು ಗೌರವ ಹಾಗೂ ಶಾಂತಿ ಯುತವಾಗಿ ಯಾವುದೇ ತಂಟೆ ತಕರಾರುಗಳಿಲ್ಲದೆ ಒಪ್ಪಿಕೊಂಡು ಶ್ರೀ ಮಠಕ್ಕೆ ಮತ್ತು ಯಾವುದೇ ತೊಂದರೆ ಯನ್ನು ಮಾಡದಿದ್ದಲ್ಲಿ ಮಾತ್ರ ಈ ಮಾಸಾಶನವನ್ನು ಪಡೆಯಲು ಅರ್ಹರಾಗಿರುತ್ತಾರೆ. ಅವರು ತಮ್ಮ ವಸತಿಯ ವ್ಯವಸ್ಥೆಯನ್ನು ಮಾಡಿಕೊಳ್ಳುವವರೆವಿಗೂ ಮೂರು ತಿಂಗಳಿಗೆ ಮಾತ್ರ ಬೆಂಗಳೂರು ಚಾಮರಾಜಪೇಟೆ ಸಿರಸಿ ರಸ್ತೆಯಲ್ಲಿರುವ ಲಿಂಗೈಕ್ಯ ಶ್ರೀ ಸೋಲೂರು ಸಿದ್ಧಪ್ಪನವರ ಮನೆಯಲ್ಲಿ ವ್ಯವಸ್ಥೆ ಮಾಡಲಾಗಿದೆ.

ಸಮಾಜ ಬಾಂಧವರು ಭಕ್ತರು, ಅಭಿಮಾನಿಗಳೂ, ಸಾರ್ವಜನಿಕರೂ ಹಾಗೂ ಹಿತೈಷಿಗಳಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಶ್ರೀ ಮಠವು ತನ್ನ ಪವಿತ್ರ ಪರಂಪರೆಯಂತೆ ಎಲ್ಲ ಕೋಮಿನ ಮತ್ತು ಎಲ್ಲ ಪಂಗಡಗಳ ಜನರಿಗೆ ಹಾಗೂ ವಿದ್ಯಾರ್ಥಿಗಳಿಗೆ ಮಾಡುತ್ತಿರುವ ಸೇವೆಯನ್ನು ಯಥಾವತ್ತಾಗಿ ಮುಂದು ವರಿಸಿಕೊಂಡು ಹೋಗುತ್ತದೆ. ಸಾರ್ವಜನಿಕರು ಸ್ವಾರ್ಥಿಗಳ ಮತ್ತು ಒಳಪಂಗಡ ವಿಷಬೀಜ ಬಿತ್ತುವವರ ಅಪಪ್ರಚಾರಗಳಿಗೆ ಮಾರು ಹೋಗದೆ ಶ್ರೀ ಮಠದ ದೈನಂದಿನ ಜನಹಿತ ಕೈಂಕರ್ಯಗಳು, ಯಥಾ, ಪ್ರಕಾರ ನಡೆದುಕೊಂಡು ಹೋಗಲು ತಮ್ಮ ಸಹಕಾರವನ್ನು ನಮಗೂ ಮತ್ತು ನಮ್ಮ ನೂತನ ಉತ್ತರಾಧಿತಾರಿಗಳಾದ ಶ್ರೀ ನಿರಂಜನ ಪ್ರಣವ ಸ್ವರೂಪಿ **ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳ**ವರಿಗೂ ಕೊಡ-ಬೇಕೆಂದು ಆಶಿಸುತ್ತೇವೆ.

**ಶ್ರೀ ಶಿವಕುಮಾರ ಸ್ವಾಮಿಗಳು**
ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರು.
ತುಮಕೂರು ಜಿಲ್ಲಾ–572104.

ಕಿರು ಲೇಖನ: ಕಲ್ಲಾಪು ಯುವಕ ಸಂಘ ಸಾರ್ಥಕ ಸಾಧನೆ

ಭಾರತ ಸರ್ಕಾರದ ವಾರ್ತಾ ಶಾಖೆ ಬೆಂಗಳೂರು.

ಗ್ರಾಮದ ಮುನ್ನಡೆಯಲ್ಲಿ ಯುವಕ ಮಂಡಳಿ 25 ವರ್ಷಗಳ ಸಾರ್ಥಕ ಸೇವೆ ಸಲ್ಲಿಸಿದೆ ಎಂದರೆ ಮಹತ್ವದ ಸಂಗತಿಯಲ್ಲದೆ ಮತ್ತೇನು? ದಕ್ಷಿಣ ಕನ್ನಡ ಜಿಲ್ಲೆಯ ಕಲ್ಲಾಪು ಗ್ರಾಮದ ವೀರಭದ್ರ ಮಹಾಮಾಯಿ ವಾಚನಾಲಯ ಮತ್ತು ಯುವಕ ಮಂಡಳಿ ಸ್ಥಾಪನೆಯಾಗಿ 25 ವರ್ಷಗಳು ಸಂದಿವೆ. ಗ್ರಾಮೀಣ ಮಕ್ಕಳಿಗೆ ಶಿಕ್ಷಣ ಸೌಲಭ್ಯ ಒದಗಿಸುವುದು ಜ್ಞಾನಾರ್ಜನೆಗೆ ನೆರವಾಗುವ ಉದ್ದೇಶದಿಂದ ಪ್ರಾರಂಭವಾದ ಈ ಸಂಘ ಈ ವರೆಗೆ ರಾಷ್ಟ್ರಕ್ಕೆ ಅತ್ಯುತ್ತಮ ನಾಗರೀಕರನ್ನು ನೀಡಿದೆ. ಉದ್ದೇಶ ಸಾಧನೆ ಪೂರ್ಣಗೊಂಡತಾಗಿದೆ. ಉಚಿತ ವಾಚನಾಲಯದಲ್ಲಿ ಪ್ರತಿದಿನ ಹಲವಾರು ದೈನಿಕ, ಸಾಪ್ತಾಹಿಕ, ಮಾಸಿಕ, ವಾರ್ಷಿಕ ಪತ್ರಿಕೆಗಳು ಬರುತ್ತಿದ್ದು ಇಡೀ ಗ್ರಾಮದ ಸಮೂಹ ಮಾಧ್ಯಮಗಳ ಸೌಲಭ್ಯವನ್ನು ಕಲ್ಪಿಸಿದೆ.

ಶಿಕ್ಷಣ ಮತ್ತು ಜ್ಞಾನಾರ್ಜನೆಯಲ್ಲದೆ ಯುವಕ, ಮಕ್ಕಳ ದೈಹಿಕ, ಮಾಸಿಕ ಆರೋಗ್ಯ ಸುಧಾರಣೆಗೂ ಶ್ರಮಿಸುತ್ತಿದೆ, ಕ್ರೀಡಾಕೂಟ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಆಗಾಗ್ಗೆ ವ್ಯವಸ್ಥೆ ಮಾಡುವ ಮೂಲಕ ಜನತೆಯಲ್ಲಿನ ವಿವಿಧ ಹವ್ಯಾಸಗಳು ವಿಕಾಸಗೊಳ್ಳುವಂತಾಗಲು ಸಹಕರಿಸುತ್ತಿದೆ. ಯಕ್ಷಗಾನ ಕಲೆಯನ್ನು ಮತ್ತಷ್ಟು ಬೆಳೆಸುವ ದೃಷ್ಟಿಯಿಂದ ಗ್ರಾಮದ ಜನತೆಗೆ ಯಕ್ಷಗಾನ, ತಾಳ, ಮದ್ದಲೆ, ನೃತ್ಯ ನಾಟಕ ಇತ್ಯಾದಿ ವಿವಿಧ ಪ್ರಕಾರಗಳಲ್ಲಿ ವಿಶೇಷ ತರಬೇತಿ ವರ್ಗಗಳನ್ನು ನಡೆಸಿದೆ. 1962ರಲ್ಲಿ ದೇಶದ ರಕ್ಷಣಾ ಪಡೆಗೆ ನಿಧಿ ಸಂಗ್ರಹಣೆ ಕಾರ್ಯಕೈಗೊಂಡಿತ್ತಲ್ಲದೆ ಆಗಾಗ್ಗೆ ಶ್ರಮದಾನ ಶಿಬಿರ ಹಾಗೂ ಕುಟುಂಬ ಯೋಜನೆ ಮುಂತಾದ ವಿಶೇಷ ಸೇವಾ ಶಿಬಿರಗಳನ್ನು ಏರ್ಪಡಿಸಿದೆ. ಕಳೆದ ಹತ್ತು ವರ್ಷಗಳಿಂದ ಪ್ರತಿ ವರ್ಷ ಶಾಲಾ ಮಕ್ಕಳಿಗೆ 1,000 ರೂ, ಬೆಲೆಯ ಬರವಣಿಗೆ ಸಾಮಗ್ರಿಯನ್ನು ಉಚಿತವಾಗಿನೀಡುತ್ತಿದೆ. ವೈದ್ಯಕೀಯ ಪರೀಕ್ಷೆ ದಂತ ಚಿಕಿತ್ಸೆ ಶಿಬಿರಗಳನ್ನು ಆಗಿಂದಾಗ್ಗೆ ವ್ಯವಸ್ಥೆ ಮಾಡಲಾಗುತ್ತಿದೆ.

1987, ಸಂಘದ ರಜತೋತ್ಸವ ವರ್ಷ ಎಂದೇ ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಇತ್ತೀಚೆಗೆ ಸಂಘದ ಸದಸ್ಯರು ಕಲಾಪು ಗ್ರಾಮದಲ್ಲಿ ಕುಷ್ಠ ರೋಗಿಗಳನ್ನು ಗುರುತಿಸುವ ಕಾರ್ಯಕ್ರಮವನ್ನು ಕೈಗೊಂಡು ಮನೆ ಮನೆಗೆ ಹೋಗಿ 1,500 ಮಂದಿಯನ್ನು ಪರೀಕ್ಷಿಸಿ ಕುಷ್ಠ ರೋಗದ ಸೋಂಕು ಇರುವ 10 ಮಂದಿ ರೋಗಿಗಳನ್ನು ಪತ್ತೆ ಹಚ್ಚಿದರು. ಇದೀಗ ಸಂಘ ರೋಗಿಗಳಿಗೆ ಚಿಕಿತ್ಸಾ ಸೌಲಭ್ಯವನ್ನು ಒದಗಿಸುತ್ತಿದೆ. ಸುರತ್ಕಲ್ ಪ್ರಾಥಮಿಕ

ರೋಗ್ಯ ಕೇಂದ್ರ ಅಧಿಕಾರ ವರ್ಗದೊಂದಿಗೆ ಸಂಪರ್ಕಿಸಿ ತಮ್ಮ ಗ್ರಾಮದಲ್ಲಿ ಉಪ ಆರೋಗ್ಯ ಕೇಂದ್ರ ಪ್ರಾರಂಭಿಸುವುದರಲ್ಲಿ ಸಹಾ ಸಂಘದ ಸಫಲ ಪ್ರಯತ್ನ ನಡೆಸಿದರು. ದಿನ ನಿತ್ಯದ ಕಾಯಿಲೆಗಳಿಗೆ ಗ್ರಾಮದಲ್ಲೇ ಚಿಕಿತ್ಸಾ ಸೌಲಭ್ಯ ಇಂದು ಲಭ್ಯವಾಗಿದೆ.

ಅಂಗನವಾಡಿ ಮತ್ತು ಹೊಲಿಗೆ ತರಪೇತಿ ಕೇಂದ್ರದ ಸ್ಥಾಪನೆ ಸಂಘದ ಮುಂದಿನ ಗುರಿ. ಗ್ರಾಮದಲ್ಲಿ ಕುಡಿಯುವ ನೀರು ಪೂರೈಕೆಗಾಗಿ ಕೊಳವೆ ಬಾವಿ ತೋಡುವುದು ಹಾಗೂ ಪುಸ್ತಕ ಭಂಡಾರವನ್ನು ಸ್ಥಾಪಿಸಲು ಸದಸ್ಯರು ಪ್ರಯತ್ನ ನಡೆಸಿದ್ದಾರೆ.

ದೃಢ ಮನಸ್ಸು ಸಾಧನೆಯ ಸಾಧನವೆಂದು ತೋರಿಸಿ ಕೊಟ್ಟಿದೆ. ಕಲ್ಲಾಪು ಯುವಕ ಸಂಘ (ಪಿಐಬಿ)

---

ಮಾನ್ಯರೇ,

ರಾಷ್ಟ್ರಕವಿ ರವೀಂದ್ರನಾಥ ಠಾಗೋರರ 125ನೇ ಜಯಂತಿ ವರ್ಷ ಇದೀಗ ಕೊನೆಗೊಳ್ಳುತ್ತಿದೆ. ರಾಷ್ಟ್ರದ ಸಮಗ್ರತೆಯನ್ನು ರಕ್ಷಿಸಿಕೊಂಡು ಬರುವಲ್ಲಿ ರವೀಂದ್ರರ ಕೃತಿಗಳು ಬಹು ಉಪಕಾರಿ. ಸಣ್ಣಕಥೆ, ಕಾದಂಬರಿ- ರಾಷ್ಟ್ರಭಕ್ತಿ ಗೀತೆಗಳ ಮೂಲಕ ರಾಷ್ಟ್ರಕ್ಕೆ ಮಹದುಪಕಾರ-ವೆಸಗಿದ್ದಾರೆ. ಮೌಲ್ಯಗಳ ಅವರ ಕೃತಿಗಳಿಗೆ ಸರಿಸಾಟಿಯಾಗಲಿಲ್ಲ ಕೃತಿಗಳು ಜಗತ್ತಿನ ಇತರೇ ಭಾಷೆಗಳಲ್ಲಿ ಕೆಲವು ಮಾತ್ರ.

" ನಾವು ಮತ್ತು ರವೀಂದ್ರರು ", 1987 ರ ವಸತಿ ಹೀನರಿಗೆ ವಸತಿ ಸೌಲಭ್ಯ ಒದಗಿಸುವ ವರ್ಷದ ಸಂದರ್ಭದಲ್ಲಿ ಕಕ್ಕೂರಿನಲ್ಲಿ ತಲೆಯಮೇಲೊಂದು ಸೂರು" ಎಂಬ ಲೇಖನಗಳನ್ನು ಈ ಹೊತ್ತಿಗೆಯಲ್ಲಿ ಕಳುಹಿಸುತ್ತಿದ್ದೇವೆ. " ಕುಷ್ಠ ರೋಗ ಶಾಪವಲ್ಲ" " ಕಲ್ಲಾಪು ಯುವಕ ಸಂಘ ಸಾರ್ಥಕ ಸಾಧನೆ " ಮತ್ತು " ವೈನಿ ಮತ್ತು ಅವರ ಸಮಾಜ ಸೇವೆ " ಎಂಬ ಮೂರು ಲೇಖನಗಳನ್ನು ಇದರೊಂದಿಗೆ ಕಳುಹಿಸುತ್ತಿದ್ದೇವೆ. ಪ್ರಕಟಿಸುವ ಕೃಪೆಮಾಡಿ.

ವಂದನೆಗಳೊಂದಿಗೆ,

ವಿಶ್ವಾಸಿ,
**ಕೃಷ್ಣಾನಂದ ಹೆಗ್ಡೆ**

ಎಫ್: 6: 10-86 ಬಿಐ
ಭಾರತ ಸರ್ಕಾರದ ವಾರ್ತಾ ಶಾಖೆ 24, ಕಬ್ಬನ್ ರಸ್ತೆ,

ದಿನಾಂಕ : ಮಾರ್ಚಿ 20, 1987

# ಗ್ರಾಮಾಂತರ ಬಸವ ಜಯಂತಿ - 197

ಹೆಚ್. ವಿ. ವೀರಭದ್ರಯ್ಯ, ಉಪನ್ಯಾಸಕರು ಕನ್ನಡ ವಿಭಾಗ, ಸಿದ್ಧಗಂಗಾ ಕಾಲೇಜು ತುಮಕೂ

**ಆತ್ಮೀಯ ಶರಣ ಬಂಧು,**

ದಿನಾಂಕ 15-5-87 ರಂದು ನೆಲಮಂಗಲ ತಾಲ್ಲೂಕು, ಸೋಮಪು ಹೋಬಳಿ, ತಿಮ್ಮನಾಯಕನಹಳ್ಳಿಯಲ್ಲಿ ಬಸವ ಜಯಂತಿ ನಡೆಯಿತು. ಕೇವಲ ಹತ್ತ ಅಥವಾ ಹದಿನೈದು ಮನೆಗಳಿರುವ ಪುಟ್ಟ ಗ್ರಾಮ ತಿಮ್ಮನಾಯಕನಹಳ್ಳಿ. ಬೆಂಗ ಳೂರು-ಪುಣೆ ರೈಲು ಮಾರ್ಗದ ಬದಿಗಿರುವ ಹಳ್ಳಿಗೆ ಲಗತ್ತಿಸಿದಂತೆ ರೈಲು ನಿಲ್ದಾ ಒಂದು ಕಡೆಗಿದ್ದರೆ ಮತ್ತೊಂದು ಕಡೆ ದೊಡ್ಡಬಳ್ಳಾಪುರ - ಡಾಬಸ್‌ಪೇಟೆ ಬಸ್ ಮಾರ್ಗವಿದೆ. ಸುತ್ತಲೂ ಮರಗಿಡಗಳು. ಕೆರೆಯ ಸುಂದರ ನೋಟ. ಸರ ಜೀವನಕ್ಕೆ ಹೆಸರಾದ ಹಳ್ಳಿ.

ದಿನಾಂಕ 10-5-87 ರಂದು ಕಣ್ಣೂರು ಮಕ್ಕಳ ದೇವರ ಮಠದಲ್ಲಿ ಬಸ ಜಯಂತಿಯನ್ನು ಆಚರಿಸಿದ ನಂತರ ತಿಮ್ಮನಾಯಕನಹಳ್ಳಿಗೆ ಪಯಣ ಬೆಳೆಸಿದ ನಮಗೆ ಅಚ್ಚುಕಟ್ಟಾದ ವ್ಯವಸ್ಥೆ ಮಾಡಲಾಗಿತ್ತು. ಕ್ಲುಪ್ತಕಾಲಕ್ಕೆ ಸಮಾರಂಭ ಪ್ರಾರಂಭವಾಯಿತು.

ಬಸವಣ್ಣನಂಥ ಧರ್ಮ ದೀಪಕರು ಜನಿಸಿ ಕರ್ನಾಟಕ ಹೆಮ್ಮೆ ಪಡುವಂತಾ- ಯಿತು. ಜಗತ್ತಿನ ಕೆಲವೇ ಮಹಾಪುರುಷರ ಮಧ್ಯೆ ಕಂಗೊಳಿಸುತ್ತಿರುವ ಕಣ್ಮಣಿ ಬಸವಣ್ಣ. ಬುದ್ಧನಾದ ಮೇಲೆ ಬಂದ ಧೀಮಂತ ಚೇತನ. ನಾನು ಎಲ್ಲರಿಗಿಂತ ಕಿರಿಯವನು ಎಂಬ ನಮ್ರ ಭಾವನೆಯಿಂದ ಮನುಜ ಕುಲವನ್ನೆಲ್ಲ ಪ್ರೀತಿಸಿದ ಬಸವ- ಣ್ಣನವರು ವಿಚಾರವಂತರು. ಮೂಢ ನಂಬಿಕೆಗಳ ವಿರುದ್ಧ ಅವರು ಸಾರಿದ ತತ್ವಗಳು ಸಾರ್ವಕಾಲಿಕ ನಂದಾದೀಪಗಳು. ಅವರು ಬೋಧಕರಲ್ಲ, ಜೀವನದುದ್ದಕ್ಕೂ ತಮ್ಮನ್ನು ತಿದ್ದಿಕೊಳ್ಳುತ್ತಲೇ ನಡೆದವರು. ಅಂತರಂಗದ ಅನ್ವೇಷಣೆಯಲ್ಲಿ ಮನೋ ವಿಜ್ಞಾನಿಯಂತೆ ಕ್ರಿಯಾಶೀಲರಾದವರು. ಒಳಗೊಂದು ಹೊರಗೊಂದು ಅವರಲ್ಲಿ ಎಂದೂ ಕಾಣಲಿಲ್ಲ. ವ್ಯಕ್ತಿಯ ಚಾರಿತ್ರ್ಯಕ್ಕೆ ಬಹಳ ಬೆಲೆಕೊಟ್ಟರು ದುರ್ದೈವವೆಂದರೆ ಇಂದು ಕೌಟುಂಬಿಕವಾಗಿ, ಸಾಂಘಿಕವಾಗಿ, ಸಾಂಸ್ಥಿಕವಾಗಿ, ಸಾಮಾಜಿಕ ಜೀವನದಲ್ಲಿ ಚಾರಿತ್ರ್ಯದ ಅವನತಿಯೇ ಎದ್ದು ಕಾಣುತ್ತಿದೆ. ಶರಣರು ವ್ಯಕ್ತಿ ದ್ವೇಷಿಗಳಲ್ಲ; ಅವಗುಣ ದ್ವೇಷಿಗಳು. ಬಸವಾದಿ ಶರಣರ ವಚನಗಳನ್ನು ಗಂಭೀರವಾಗಿ ಅಧ್ಯ- ಯನ ಮಾಡಿದರೆ ಇಂದಿನ ಯುವ ಜನಾಂಗ ಭವ್ಯ ಜೀವನವನ್ನು ಕಾಣಬಹುದು. ಹಿರಿಯರಾದವರು ದೂರದೃಷ್ಟಿಯಿಂದ ತಮ್ಮ ಪೀಳಿಗೆಯನ್ನು ಇಂದು ತಿದ್ದಬೇಕು. ವಿಚಾರ ಸಂಪತ್ತು ಆಚಾರವಾಗಿ ಪರಿವರ್ತಿತವಾಗುವಂತೆ, ಧಾರ್ಮಿಕ ಶಿಕ್ಷಣವನ್ನು ಕೊಡಬೇಕು. ಧರ್ಮದ ತಳಹದಿಯಿಲ್ಲದೆ ಕಟ್ಟಿದ ಯಾವ ಬದುಕೂ ನಿಲ್ಲಲಾರದು.

ಆದಕ್ಕಾಗಿಯೇ ಪರಮ ಪೂಜ್ಯರು ಗ್ರಾಮಾಂತರ ಪ್ರದೇಶಗಳಲ್ಲಿ ಬಸವ ಜಯಂತಿ-ಯನ್ನು ಆಚರಿಸುವ ಮಹಾ ಸಾಹಸವನ್ನು ಮಾಡಿದ್ದಾರೆ. "ಬಿತ್ತಿದ ಬೀಜ ಕೆಟ್ಟತ್ತೆನ ಬೇಡ ಮುಂದಿನ ಫಲದೊಳಗರಸಿಕೋ" ಎನ್ನುತ್ತಾರೆ ಶರಣರು. ಇಂದು ತಿಮ್ಮನಾಯಕನ ಹಳ್ಳಿಯಲ್ಲಿ ಬಿತ್ತಿರುವ ಬಸವತತ್ವದ ಬೀಜಗಳು ಫಲಕೊಡದೆ ಹೋಗಲಾರವು. ಇಂದಲ್ಲ ನಾಳೆ ಅವುಗಳ ಸತ್ವ ಹೊಳೆಯದಿರಲಾರದು. ಇಂದಿನ ಲಾಟರಿ ಸಂಸ್ಕೃತಿ, ಚುನಾವಣಾ ಸಂಸ್ಕೃತಿಯ ಅಬ್ಬರಗಳ ಮಧ್ಯೆ ಶಾಂತ ಸುಂದರವಾಗಿ ಶರಣಸಂಸ್ಕೃತಿ ಅರಳಬೇಕಾಗಿದೆ. ಆ ಕಾರಣಕ್ಕಾಗಿ ಪೂಜ್ಯ ಶ್ರೀ ಶ್ರೀಗಳು ಅಧ್ಯಾಪಕ ವಿದ್ಯಾರ್ಥಿಗಳೊಂದಿಗೆ ಹಳ್ಳಿ-ಡಿಳ್ಳಿಯಲನ್ನದೆ ಬಸವ ಯಾತ್ರೆಯನ್ನು ನಡೆಸಿದ್ದಾರೆ ಎಂದು ಮಾತನಾಡಿದರು ಶ್ರೀ ಬಿ. ವೀರಭದ್ರಯ್ಯನವರು.

ಮಾನವನಿಗೆ ಬುದ್ಧಿಯೊಂದೇ ಸರ್ವಸಾಧನ ಸಂಪತ್ತಲ್ಲ; ಭಾವನೆಯೂ ಮುಖ್ಯ. ಮಾನವ ಹುಟ್ಟಿದಂದಿನಿಂದ ಭಾವನೆಗಳು ಬದುಕನ್ನು ಆಳುತ್ತ ಬಂದಿವೆ, ಬೆಳೆಸುತ್ತ ಬಂದಿವೆ ಮನುಕುಲದ ಒಳಿತಿಗಾಗಿ ಶ್ರಮಿಸಿದ ಸಾಧಕ ಜೀವಿಗಳನ್ನು, ಸಂತರನ್ನು, ಶರಣರನ್ನು, ದಾರ್ಶನಿಕರನ್ನು, ಮಹಾಪುರುಷರನ್ನು ಮುಗ್ಧ ಜಗತೆ ಪ್ರೀತಿಯಿಂದ ನಡೆಸಿಕೊಂಡು ಬಂದಿದ್ದಾರೆ. ಅಂಥವರ ಹೆಸರಲ್ಲಿ ದೇವಾಲಯಗಳನ್ನು ಕಟ್ಟಿಸಿದ್ದಾರೆ. ಕೆರೆ, ಭಾವಿ, ಊರು ಕಟ್ಟಿಸಿದ್ದಾರೆ. ಮಕ್ಕಳು, ಮರಿಗಳಿಗೆ ಅವರ ಹೆಸರಿಟ್ಟು ಸ್ಮರಿಸಿದ್ದಾರೆ. ಅದರ ಮೇಲೆ ಹಾಡು ಕಟ್ಟಿ, ಕಥೆ ಹೆಣೆದು, ಗಾದೆ ಹೇಳಿ, ಒಗಟು ಒಡ್ಡಿ ಸಾಹಿತ್ಯ ರಚಿಸಿದ್ದಾರೆ. ಅಂಥ ಸಾಹಿತ್ಯ ಶಿಷ್ಯ ಸಮಾಜ ದಿಂದ ದೂರವಿದ್ದಿರಬಹುದು, ಅಥವಾ ಶಿಷ್ಯರ ಗಮನಕ್ಕೆ ಬಾರದಿರಬಹುದು. ಆದರೆ ಜನಪದರ ಹೃದಯಾಂತರಾಳದಲ್ಲಿ ಆ ಶ್ರೇಷ್ಠ ಜೀವಿಗಳು ಇಂದೂ ಜೀವಂತ ವಾಗಿದ್ದಾರೆ. ಅವರು ಬಿತ್ತಿ ಹೋದ ಸಂದೇಶ ಇಂದೂ ಗ್ರಾಮೀಣ ಮುಗ್ಧ ಜನತೆಯಲ್ಲಿ ನುಡಿಯಾಡುತ್ತಿದೆ. ಬಸವಣ್ಣನವರ ಹಾಗೆ ಜನಪದ ಸಮಷ್ಟಿಯನ್ನು ಪ್ರೀತಿಸಿದವರು ಇನ್ನೊಬ್ಬರನ್ನು ಕಾಣಲಾಗದು. 'ಇವನಾರವ' ಎಂಬುದು ಬಸವಣ್ಣ ನವರಲ್ಲಿ ಎಂದೂ ಕಾಣಲಿಲ್ಲ 'ಇವನಮ್ಮವ' ನೆಂದೇ ಅವರ ಜೀವನ ಸಂಗೀತ. ಬಿಸಿಲಲ್ಲ ಬೆಳದಿಂಗಳಾಗಿ, ದೀನ ದಲಿತರಿಗೆ ಆಶಾ ಕಿರಣವಾಗಿ, ಮನುಕುಲದ ಮಂಗಳ ದೀಪವಾಗಿ, ಅಕೃತ್ರಿಮ ಬದುಕಿನ ಅಮೂಲ್ಯ ವ್ಯಕ್ತಿಯಾಗಿ ಬಸವಣ್ಣ ಜನಪದರ ಚಿತ್ತದಲ್ಲಿ ನೆಲೆಗೊಂಡಿರುವುದನ್ನು ಹಾಡುಗಳ ಮೂಲಕ ಬಿಡಿಸಿ ತೋರಿ-ದರು–ಶ್ರೀ ಹೆಚ್.ವಿ. ವೀರಭದ್ರಯ್ಯನವರು.

ತಿಮ್ಮನಾಯಕನ ಹಳ್ಳಿಯ ಬಂಧುಗಳು ಬಸವ ಜಯಂತಿ ಆಚರಿಸುವುದರ ಮೂಲಕ ಒಳ್ಳೆಯ ಕೆಲಸ ಮಾಡಿದ್ದಾರೆ. ಮಹಾಪುರುಷರ ಜಯಂತಿಯನ್ನು ಆಚರಿಸು ವುದರಿಂದ ನಮ್ಮ ಜೀವನ ಸುಂದರವಾಗುತ್ತದೆ ಬಸವಣ್ಣನವರು ಜಗತ್ತಿನ

ಇತಿಹಾಸದಲ್ಲಿಯೇ ಸಮಗ್ರ ಕ್ರಾಂತಿಯ ಮೂಲ ಪುರುಷರು. ಅವರು ಕೇವಲ ತತ್ವ ಬೋಧಕರಾಗಿ ಬಂದವರಲ್ಲ. ತನು ದಂಡಿಸಿ; ಮನ ಬಳಲಿಸಿ, ಕಾಯಕಷ್ಟವ ಮಾಡಿ, ಅನುಭವಕ್ಕೆ ಬಂದಮೇಲೆ ಆಚರಣೆಯಲ್ಲಿ ತಂದವರು. ಇತರ ಧರ್ಮ ಬೋಧಕರಿಗೂ ಅವರಿಗೂ ವ್ಯತ್ಯಾಸವಿದೆ 'ನಾನು ದೇವರ ದೂತ,' ನನ್ನ ಮಾತಿನಂತೆ ನೀವೆಲ್ಲ ನಡೆಯಿರಿ' ಎಂದು ಎಂದೂ ಹೇಳಲಿಲ್ಲ. 'ಎನಗಿಂತ ಕಿರಿಯರಿಲ್ಲ' ಎಂದೇ ನಮ್ರತೆಯ ಸಂಸ್ಕೃತಿಯನ್ನು ಬಿತ್ತಿ ಬೆಳೆದವರು. ಜೀವನ ವೆಂಬುದು ಶಾಪಗ್ರಸ್ಥವಾಗಿ ಬಂದುದಲ್ಲ. ಕರ್ಮಕ್ಷಯಕ್ಕಾಗಿ ಒದಗಿದುದಲ್ಲ. ಅದೊಂದು ಮಹಾಭಾಗ್ಯ, ದೇವದೇವನಿತ್ತ ದಿವ್ಯ ಪ್ರಸಾದ. ಅಂತರಂಗ ದಾತ್ಮನನ್ನು ಅರ್ಥ ಮಾಡಿಕೊಳ್ಳಲು. ಪ್ರಪ್ತಾವಾದ ಒಂದು ಸದವಕಾಶ. ಅದ್ಕಕಾಗಿಯೇ ದೇವನೊಲಿಸ ಬಂದ ಪ್ರಸಾದ ಕಾಯವ ಕೆಡಿಸದಂತಿರಬೇಕಾದರೆ ಜೀವಿ ಸದಾ ಜಾಗೃತನಾಗಿರಬೇಕು, ಎಚ್ಚರದ ಬೆಳಕಿನಲ್ಲಿ ನಿರಂತರ ಸಾಧನೆ ಮಾಡು ತ್ತಿರಬೇಕು, ತಾನು ಕಂಡ ಅರಿವನ್ನು ಕುರುಹಾಗಿಟ್ಟುಕೊಂಡು ಮೇಲೇರಬೇಕು. ಜಾಗೃತಾವಸ್ಥೆಗೆ ದಿವ್ಯ ಮಾರ್ಗ ಕಾಯಕ ಶ್ರದ್ಧೆ. ಕಾಯಕವೆಂಬುದು ಬರೀ ದುಡಿಮೆಯಲ್ಲ, ತಾನೇಕೆ ದುಡಿಯುತ್ತಿದ್ದೇನೆ? ತನ್ನ ದುಡಿಮೆಯಿಂದ ಏನಾಗು ತ್ತಿದೆ? ತತ್ವದ ಬೆಳಕಿನಲ್ಲಿ ಕಾಯಕ ಸಾಗಿದೆಯೇ? ದುಡಿಮೆಯಿಂದ ಬಂದ ಫಲ ಹೇಗೆ ವಿನಿಯೋಗವಾಗುತ್ತಿದೆ? ತನ್ನ ಕಾಯಕದಿಂದ ಆತ್ಮನ ಅರಿವಾಗುತ್ತಿದೆಯೆ? ಅಥವಾ ಬರೀಗಾಣದೆತ್ತಿನಂತೆ ಸುತ್ತುತ್ತಿದ್ದೇನೆಯೆ? ಎಂಬೆಲ್ಲಾ ಚಿಂತನ ಮಂಥನಗಳಿಗೆ ಪ್ರಯೋಗ ಶಾಲೆಯಾಗಿ ನಡೆಯುವ ಮಹಾಮಣಿಹ. ದುಡಿಮೆ ಯಿಂದ ಬಂದುದು ದಾಸೋಹದಲ್ಲಿ ಪರ್ಯವಸಾನವಾಗಬೇಕು. ಕಾಯಕ ಆತ್ಮ ವಿಶ್ವಾಸದ ತವನಿಧಿಯಾದರೆ ದಾಸೋಹ ನಿರಂಹಕಾರದ ಬೀಗದಕೈ. ಆದುದರಿಂದಲೇ ಶರಣರ ಜೀವನ 'ಮನೆನೋಡಾ ಬಡವರು ಮನನೋಡಾ ಸಂಪನ್ನರು' ಎಂಬಂತೆ ಅರ ಳಿದುದು. ತಿಮ್ಮನಾಯಕನಹಳ್ಳಿ ಪುಟ್ಟಗ್ರಾಮರಿವದರೂ ಬಸವ ಜಯಂತಿ ಆಚರಣೆಯ ಮೂಲಕ ತಮ್ಮ ಜೀವನದ ಉನ್ನತಿಗೆ ಮಾರ್ಗ ಕಾಣುವಂತಾಗಿದೆ. ಒಳ್ಳೆಯದು ಬಸ ವಾದಿ ಶರಣರು ಎಲ್ಲರಿಗೂ ಮಂಗಳಾಶೀರ್ವಾದ ಮಾಡಲಿ ಎಂದ ಪೂಜ್ಯ ಶ್ರೀ ಶ್ರೀಗಳು ಆಶೀರ್ವಚನ ನೀಡಿದರು. ರಾತ್ರಿ 10ಘಂಟೆಗೆ ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿಯ ವರಿಂದ ಜಗಜ್ಯೋತಿ ಬಸವೇಶ್ವರ ನಾಟಕ ಅಭಿನಯಿಸಲಾಯಿತು. ಸುಮಾರು 15ಸಾವಿರ ಪ್ರೇಕ್ಷಕರು ನಾಟಕ ನೋಡಿ ಆನಂದಿಸಿದರು. 'ಪ್ರತಿವರ್ಷ ಶಿವರಾತ್ರಿ ದಿನ ಮಠದಲ್ಲಿ ನಾಟಕ ನಡೆಯುತ್ತಿದ್ದ ನಾನು ನೋಡಲಾಗಿರಲಿಲ್ಲ, ಇವತ್ತು ನೋಡಿದೆ, ತುಂಬ ಚೆನ್ನಾಗಿದೆ ಎಂದು ಮುದ್ದಲಿಂಗನಹಳ್ಳಿಯ ಗೌಡರೊಬ್ಬರು ನಾಟಕ ಮುಗಿದು ಊರಿಗೆ ಹೋಗುತ್ತಿರುವಾಗ ಜೊತೆಯವರೊಂದಿಗೆ ಹೇಳುತ್ತಿದ್ದರು.

# ತುಮಕೂರು ನಗರ ಮತ್ತು ಜಿಲ್ಲೆಗೆ ಶ್ರೀ ಸಿದ್ಧಗಂಗಾ ಮಠದ ಕೊಡುಗೆ

ಧರ್ಮ ಸಂಸ್ಥೆಗಳು ಮಠ ಮಾನ್ಯಗಳು ಸಮಾಜದ ಸುಸಂಸ್ಕೃತಿಯ ಫಲವಾಗಿ ಅರಳಿದ ಸೇವಾ ಕ್ಷೇತ್ರಗಳು. ಧರ್ಮದ ಬೆನ್ನೆಲುಬು ನೈತಿಕತೆ, ಶ್ರೀ ಸಿದ್ಧಗಂಗಾ ಮಠ ಈ ತತ್ವದ ಆಧಾರದ ಮೇಲೆ ಎದ್ದುನಿಂತ ತ್ರಿವಿಧ ದಾಸೋಹ ಕ್ಷೇತ್ರ. ರಾಷ್ಟ್ರದ ಹೆಮ್ಮೆಯ ಆಸ್ತಿ. ಬೇರೆ ಮಠ ಮಾನ್ಯಗಳಿಗೆ ಸೇವಾ ಸಂಸ್ಥೆಗಳಿಗೆ ಮದರಿಯಾಗಿ ಬೆಳೆದ ಆದರ್ಶ ಸಂಸ್ಥೆ. ಶ್ರೀ ಮಠದ ಸರ್ವಾಂಗೀಣ ಅಭಿವೃದ್ಧಿಗೆ ಕಾರಣ ಪುರುಷರಾದವರು ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರು. ಸಿದ್ಧಗಂಗೆಯ ನೆಲವನ್ನೆಲಾ ಹೊನ್ನಾಗಿ ಪರಿವರ್ತಿಸಿದ ಪವಾಡ ಪುರುಷರು. ಸಾವಿರಾರು ಗ್ರಾಮೀಣ ಬಡ ವಿದ್ಯಾರ್ಥಿಗಳ ಬಾಳಿಗೆ ಬೆಳಕು ಕೊಟ್ಟವರು. ಅಸಂಖ್ಯಾತ ಭಕ್ತಾದಿಗಳ ಜೀವನೋಪಾಯಕ್ಕೆ ಹಲ-ವಾರು ರೀತಿಯಲ್ಲಿ ಮಾರ್ಗದರ್ಶನ ಮಾಡಿದವರು. ಕಾವಿಗೆ ಗೌರವವನ್ನು ತಂದುಕೊಟ್ಟ ಮಹಾ ತಪಸ್ವಿಗಳು.

ಪೂಜ್ಯ ಉದ್ದಾನ ಶಿವಯೋಗಿಗಳವರು 1917 ರಲ್ಲಿ ಸಾರ್ವಜನಿಕ ವಿದ್ಯಾರ್ಥಿ ನಿಲಯವನ್ನು ಶ್ರೀ ಮಠದಲ್ಲಿ ತೆರೆದು ಶ್ರೀ ಮಠ ಜಾತ್ಯತೀತವಾದ ಸಂಸ್ಥೆಯೆಂಬುದನ್ನು ತೋರಿಸಿಕೊಟ್ಟರು. ಆಗಿನ್ನು ಸರ್ಕಾರ ಕೋಮುವಾರು ವಿದ್ಯಾರ್ಥಿನಿಲಯಗಳ ಸ್ಥಾಪನೆಗೆ ಪ್ರೋತ್ಸಾಹ ನೀಡುತ್ತಿದ್ದಕಾಲ. ಆದರೆ ಶಿವಯೋಗಿಗಳ ದಾರ್ಶನಿಕ ದೃಷ್ಟಿ, ತುಂಬಾ ದೊಡ್ಡದು. ಮಾನವೀಯ ಅನುಕಂಪ ಮತ್ತು ಸಮಾನಭಾವನೆಗಳನ್ನು ಪ್ರಾಯೋಗಿಕವಾಗಿ ಆಚರಣೆಗೆ ತಂತದ್ದು. ಪೂಜ್ಯ ಶಿವಯೋಗಿಗಳವರು ಸಂಸ್ಕೃತಾಭ್ಯಾಸ ಕೇವಲ ಒಂದು ವರ್ಗದವರಿಗೆ ಸೀಮಿತವಾಗಿದ್ದ ಆಕಾಲದಲ್ಲಿ ಎಲ್ಲ ಕೋಮಿನ ವಿದ್ಯಾರ್ಥಿಗಳು ಸಂಸ್ಕೃತಾಭ್ಯಾಸ ಮಾಡಲು ಸಂಸ್ಕೃತ ಪಾಠಶಾಲೆಯನ್ನು ತೆರೆದು ಉಚಿತವಾಗಿ ಊಟವಸತಿ ಸೌಕರ್ಯಗಳನ್ನು ಮಾಡಿಕೊಟ್ಟರು.

ತುಮಕೂರು ನಗರ ಪ್ರಾರಂಭದಿಂದಲೂ ಶೈಕ್ಷಣಿಕ ಕ್ಷೇತ್ರದಲ್ಲಿ ಆಸಕ್ತಿ-ಯನ್ನು ಬೆಳಸಿಕೊಂಡು ಬಂದಿದೆ. 1942 ರಲ್ಲಿ ತುಮಕೂರಿನಲ್ಲಿ ಇದ್ದುದು ಒಂದೇ ಸರ್ಕಾರಿ ಪ್ರೌಢಶಾಲೆ. ವಿದ್ಯಾರ್ಥಿಗಳ ಅದರಲ್ಲೂ ಗ್ರಾಮೀಣ ವಿದ್ಯಾರ್ಥಿಗಳ ಸಂಖ್ಯೆ ಏರುತ್ತ ಬಂದುದನ್ನು ಗಮನಿಸಿ ಅಂದಿನ ಸಚಿವರಾಗಿದ್ದ ಶ್ರೀ ಅಪ್ಪಾಜಿಗೌಡರ ಸೂಚನೆಯಂತೆ ಪುರಸಭೆಯವರು ಪ್ರೌಢಶಾಲೆಗಳನ್ನು ಪ್ರಾರಂಭಿಸಲು ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸಿದಾಗ ನಗರ ಪ್ರಮುಖರಾದ ಶ್ರೀ ಟಿ. ಎನ್. ಕೆಂಪಹೊನ್ನಯ್ಯ ಮುಂತಾದವರ ಬಿನ್ನಹಪೂರ್ವಕ ಒತ್ತಾಯದ ಮೇರೆಗೆ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರು ಶ್ರೀ ಸಿದ್ಧಗಂಗಾ ಪ್ರೌಢಶಾಲೆಯನ್ನು 1943-44 ರಲ್ಲಿ ತುಮಕೂರಿನಲ್ಲಿ

ಪ್ರಾರಂಭಿಸುವುದರ ಮೂಲಕ ನಗರ ಜೀವನದ ಬೆಳವಣಿಗೆಗೆ ಪ್ರಾರಂಭಮಾಡಿದರು

ಶ್ರೀ ಮಠದ ಆರ್ಥಿಕ ಸ್ಥಿತಿ ಆಗ ಅಷ್ಟೇನು ಉತ್ತಮವಾಗಿರಲಿಲ್ಲ. ಆದರೂ ಅನುಭವಿ, ಅಧ್ಯಾಪಕರನ್ನು ತಾವು ಸ್ಥಾಪಿಸಿದ ಸಿದ್ಧಗಂಗಾ ಪ್ರೌಢಶಾಲೆಗೆ ನೇಮಕ ಮಾಡಿ ಸರ್ಕಾರಿ ಪ್ರೌಢಶಾಲೆಗಿಂತಲೂ ಉತ್ತಮ ಶಿಕ್ಷಣ ತುಮಕೂರಿನ ಹಾಗೂ ಸುತ್ತಮುತ್ತಲಿನ ಗ್ರಾಮೀಣ ವಿದ್ಯಾರ್ಥಿಗಳಿಗೆ ಒದಗಿಸುವ ಕೃಪೆ ಮಾಡಿದರು. ಶಾಲೆಯ ಫಲಿತಾಂಶ ಉತ್ತಮವಾಗಿ ನಾಗರಿಕರ ಗೌರವಕ್ಕೆ ಪಾತ್ರವಾಯಿತು. ಈ ಶಾಲೆಯಿಂದ ಹೊರ ಬಂದ ವಿದ್ಯಾರ್ಥಿಗಳಿಂದು ಸರ್ಕಾರದ ಸಮಾಜದ ಗಣ್ಯ ಸ್ಥಾನಗಳಲ್ಲಿ ಸೇವೆ ಸಲ್ಲಿಸುತ್ತಿರುವುದು ಹೆಮ್ಮೆಯ ವಿಷಯವಾಗಿ

ಇದು ವೈಜ್ಞಾನಿಕಯುಗ ಅದರಲ್ಲೂ ತಾಂತ್ರಿಕ ಶಿಕ್ಷಣ ಯುಗ. ತಾಂತ್ರಿಕ ಶಿಕ್ಷಣಕ್ಕೆ ರಾಷ್ಟ್ರದ ಎಲ್ಲ ಕಡೆಯಿರುವ ಆವಶ್ಯಕತೆಯನ್ನು ಮನಗಂಡ ಭಕ್ತಾದಿಗಳು ಪೂಜ್ಯ ಶ್ರೀ ಶ್ರೀ ಗಳವರನ್ನು ಪ್ರಾರ್ಥಿಸಿಕೊಂಡ ಮೇರೆಗೆ ನಗರದ ಉದಾರ ದಾನಿಗಳ ಕೊಡುಗೈ ಸಹಾಯದೊಂದಿಗೆ 1964 ರಲ್ಲಿ ಶ್ರೀ ಸಿದ್ಧಗಂಗಾ ಇಂಜಿನಿಯರಿಂಗ್ ಕಾಲೇಜನ್ನು ತುಮಕೂರಿನಲ್ಲಿ ಸ್ಥಾಪಿಸಿದರು. ಶ್ರೀ ಎಂ. ವಿ. ಶಿವಪ್ಪನವರು ಉದಾರವಾಗಿ ದಾನ ಮಾಡಿದ ಜಮೀನಿನಲ್ಲಿ ಕಾಲೇಜು ಪ್ರಾರಂಭವಾಯಿತು. ಆ ದಿನಗಳಲ್ಲಿ ಜಮೀನಿನ ಬೆಲೆ ಎಕರೆಗೆ 200 ರೂಗಳು ಮಾತ್ರ ನಡೆಯುತ್ತಿತ್ತು. ಶ್ರೀ ಶ್ರೀಗಳವರು ಕಾಲೇಜನ್ನು ಪ್ರಾರಂಭಿಸಿದ ನಂತರ ಅಕ್ಕಪಕ್ಕದ ಜಮೀನುಗಳ ಬೆಲೆ ದಿನೇ ದಿನೇ ಏರುತ್ತ ಹೋಯಿತು. 1970 ರ ಸಮಯಕ್ಕೆ ಎಕರೆಗೆ 20,000 ರಿಂದ 25,000 ಗಳವರೆಗೆ ಬೆಲೆ ಏರಿತು. ಇದರಿಂದಾಗಿ ತುಮಕೂರು ನಗರದ ಅಕ್ಕ ಪಕ್ಕದ ಜಮೀನು ಮಾಲೀಕರಿಗೆ ಸಾಕಷ್ಟು ಹಣ ಸಂಗ್ರಹವಾಯಿತು. ಆರ್ಥಿಕ ಪರಿಸ್ಥಿತಿ ಪರೋಕ್ಷವಾಗಿ ಅಭಿವೃದ್ಧಿಗೊಳ್ಳಲು ಕಾರಣವಾಯಿತು. ಎಸ್. ಐ ಟಿ. ಸ್ಥಾಪನೆಯಾದಮೇಲೆ ತುಮಕೂರಿನ ಹೆಸರು ರಾಷ್ಟ್ರದಾದ್ಯಂತ ಕೇಳುವಂತಾಯಿತು. ದೇಶದ ಎಲ್ಲ ಪ್ರಾಂತಗಳಿಂದ ಎಸ್. ಐ. ಟಿ. ಯಲ್ಲಿ ವಿದ್ಯಾಭ್ಯಾಸ ಮಾಡಲು ವಿದ್ಯಾರ್ಥಿಗಳು ಧಾವಿಸಲಾರಂಭಿಸಿದರು. ಆದರಿಂದಾಗಿ ವಸತಿ ಸೌಕರ್ಯ ಮತ್ತೊಂದು ಸಮಸ್ಯೆಯಾಗಿ ಹೊಸ ಹೊಸ ಮನೆಗಳ ನಿರ್ಮಾಣ ವೇಗವಾಗಿ ಪ್ರಾರಂಭವಾಯಿತು. ನಗರದ ಬೆಳವಣಿಗೆಗೆ ಪರೋಕ್ಷವಾಗಿ ಎಸ್. ಐ. ಟಿ. ಹೀಗೆ ಕಾರಣವಾಗುತ್ತಾ ಬಂದಿತು. ಉತ್ತಮವಾದ ಬೋಧನೆ ಉತ್ತಮ ಆಡಳಿತ ವ್ಯವಸ್ಥೆ ಪ್ರಾಕೃತಿಕ ಪ್ರಶಾಂತವಾತಾವರಣದಿಂದಾಗಿ ಎಸ್. ಐ. ಟಿ. ರಾಷ್ಟ್ರದ ಉತ್ತಮ ಶೈಕ್ಷಣಿಕ ಸಂಸ್ಥೆಯೆಂದು ಜನಜನಿತವಾಗುತ್ತಾ ವಿದ್ಯಾರ್ಥಿಗಳನ್ನು ಆಕರ್ಷಿಸುತ್ತಾ ಬಂದಿತು. ವಿದ್ಯಾರ್ಥಿಗಳ ಬೆಳವಣಿಗೆಯಿಂದ ಹಲವಾರು ಹೊಸ ಹೊಸ ಸೇವಾ ಕ್ಷೇತ್ರಗಳು ತುಮಕೂರು ನಗರಕ್ಕೆ ಬರುವಂತಾಯಿತು. ಉದಾಹರಣೆಗಾಗಿ ಬ್ಯಾಂಕಿಂಗ್ ಉದ್ಯಮ ಬೆಳೆಯುತ್ತಾ ಬಂದಿತು. ಹಲವಾರು ಬ್ಯಾಂಕುಗಳು ಎಸ್. ಐ. ಟಿ.

ಪ್ರಾರಂಭವಾದಮೇಲೆ ತಮ್ಮ ಶಾಖೆಗಳನ್ನು ತೆರೆದು ಆರ್ಥಿಕ ವಹಿವಾಟು ನಗರ ಜೀವನದಲ್ಲಿ ಪ್ರಮುಖ ಪಾತ್ರ ವಹಿಸುವಂತಾಯಿತು. ಅನೇಕ ಸ್ಥಳೀಯರಿಗೆ ಉದ್ಯೋಗಾವಕಾಶಗಳು, ತನ್ಮೂಲಕ ದೊರೆಯುವಂತಾಯಿತು. ಇಂದು ಎಸ್.ಐ.ಟಿ. ಒಂದರಿಂದಲೇ ಸುಮಾರು 500–600 ಕುಟುಂಬ ಗಳು ನಗರ ಜೀವನಕ್ಕೆ ಸೇರ್ಪಡೆಯಾಗಿ ಸೇವೆ ಸಲ್ಲಿಸುತ್ತಿವೆ. ವಿದ್ಯಾರ್ಥಿ-ಗಳಂತು ನಗರದ ಎಲ್ಲ ಭಾಗಗಳಲ್ಲಿ ಹರಡಿಕೊಂಡಿದ್ದು ವಿವಿಧ ವಿಭಿನ್ನ ಸಾಂಸ್ಕೃತಿಕ ಬೆಳವಣಿಗೆಗೆ ಕಾರಣ ಕರ್ತರಾಗಿದ್ದಾರೆ.

ಪ್ರಾಥಮಿಕ ಶಾಲಾ ಉಪಾಧ್ಯಾಯರ ತರಬೇತಿ ಸಲುವಾಗಿ ಪೂಜ್ಯ ಶ್ರೀ ಶ್ರೀ ಗಳವರು 1956 ರಲ್ಲಿ ಶ್ರೀ ಸಿದ್ಧಗಂಗಾ ಉಪಾಧ್ಯಾಯ ತರಬೇತಿ ಸಂಸ್ಥೆಯನ್ನು ತುಮಕೂರಿನಲ್ಲಿ ಪ್ರಾರಂಭಿಸುವುದರ ಮೂಲಕ ಸಹಸ್ರಾರು ಮಂದಿ ಇಂದು ಅಧ್ಯಾಪಕರಾಗಲು ಕಾರಣರಾಗಿದ್ದಾರೆ. ಜೊತೆಗೆ ಸಿದ್ಧಗಂಗಾ ಮಾಧ್ಯಮಿಕ ಶಾಲೆ, ಸಿದ್ಧಗಂಗಾ ಎಲಿಮೆಂಟರಿ ಶಾಲೆ, ಪ್ರಾರಂಭಿಸಿ ಸಹಸ್ರಾರು ಪುಟಾಣಿಗಳಿಗೆ ಶಿಕ್ಷಣಾವಕಾಶವನ್ನು ಒದಗಿಸಿಕೊಟ್ಟರು.

ತುಮಕೂರು ಶಿಕ್ಷಣ ಕ್ಷೇತ್ರದಲ್ಲಿ ದಿನೇ ದಿನೇ ಬೆಳೆಯುತ್ತಾ ಬಂದಿತು, ಹೆಣ್ಣುಮಕ್ಕಳ ವಿದ್ಯಾಭ್ಯಾಸವಂತು ಆಧುನಿಕ ಕಾಲಕ್ಕೆ ತಕ್ಕ ಹಾಗೆ ನಡೆಯ ಬೇಕು ಎಂಬುದನ್ನು ಮನಗಂಡು ಪ್ರತ್ಯೇಕ್ಷವಾಗಿ ಮಹಿಳಾ ಕಾಲೇಜೊಂದನ್ನು 1966ರಲ್ಲಿ ತುಮಕೂರು ನಗರದಲ್ಲಿ ಪ್ರಾರಂಭಿಸಿ ಹೆಣ್ಣು ಮಕ್ಕಳ ವಿದ್ಯಾಭ್ಯಾ ಸದಲ್ಲಿ ಹೊಸ ಅಧ್ಯಾಯವನ್ನೇ ಪ್ರಾರಂಭಿಸಿದರು. ಅಂದಿನ ಸರ್ಕಾರಿ ಕಾಲೇಜು ನಗರದ ಹೊರ ಹೊಲಯಕ್ಕೆ ಸ್ಥಳಾಂತರಗೊಂಡು ಹೆಣ್ಣು ಮಕ್ಕಳು ಪರಿತಪಿ ಸುತ್ತಿದ್ದ ಕಾಲದಲ್ಲಿ ಪೂಜ್ಯ ಶ್ರೀ ಶ್ರೀಗಳು ತೆರೆದ ಸಿದ್ಧಗಂಗಾ ವಿಜ್ಞಾನ ಕಲಾ ಮತ್ತು ವಾಣಿಜ್ಯ ಕಾಲೇಜು ಅವರ ಪಾಲಿಗೆ ವರದಾನವಾಯಿತು. ಜಿಲ್ಲಾ ಬೋರ್ಡಿನವರು ಕಾಲೇಜನ್ನು ನಡೆಸಲು ಕಟ್ಟಡವನ್ನು ಬಾಡಿಗೆ ಕೊಟ್ಟು ಸಹ ಕರಿಸಿದರು. ಪುರಪ್ರಮುಖರ ಪ್ರಾರ್ಥನೆಯ ಮೇರೆಗೆ ಶ್ರೀ ಶ್ರೀಗಳವರು ಈ ಕಾಲೇಜನ್ನು ಸ್ಥಾಪನೆ ಮಾಡದೇ ಹೋಗಿದ್ದರೆ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಅಂದು ಆಗುತ್ತಿದ್ದ ತೊಂದರೆ ಊಹಿಸಲೂ ಆಗದು.

ತುಮಕೂರು ನಗರದಲ್ಲಿ ಸಿದ್ಧಗಂಗಾ ಮಠದವತಿಯಿಂದ ಬಿ.ಇಡಿ. ಕಾಲೇಜನ್ನು, ಸಿದ್ಧಗಂಗಾ ಜೂನಿಯರ್ ಕಾಲೇಜನ್ನು, ಬಸವೇಶ್ವರ ಇಂಗ್ಲೀಷ್ ಶಾಲೆಯನ್ನು, ಸಿದ್ಧಗಂಗಾ ಫಾರ್ಮಸಿ ಕಾಲೇಜನ್ನು ಪರಮಪೂಜ್ಯರು ಅವಶ ಕತೆಯನ್ನು ಗಮನಿಸಿ ಕಾಲ ಕಾಲಕ್ಕೆ ತೆರೆದು ಮಹೋಪಕಾರ ಮಾಡಿದ್ದಾರೆ. ಈ ಎಲ್ಲ ಸಂಸ್ಥೆಗಳಲ್ಲಿ ಅಭ್ಯಾಸ ಮಾಡುತ್ತಿರುವ ನಗರದ ಹಾಗೂ ಜಿಲ್ಲೆಯ ಬೆಳವಣಿಗೆಗೆ ಗಣನೀಯ ಉಪಕಾರವಾಗಿದೆ. ಈ ಉಪಕಾರ ಶೈಕ್ಷಣಿಕವಾಗಿ ಸಾಂಸ್ಕೃತಿಕವಾಗಿ ಎಲ್ಲಕ್ಕೂ ಮಿಗಿಲಾಗಿ ಆರ್ಥಿಕವಾಗಿ ಆಗಿರುವುದನ್ನು ವಿಚಾರ ವಂತರು ಗಮನಿಸಬೇಕಾಗಿದೆ.

ತುಮಕೂರು ಜಿಲ್ಲೆ ಭಾಗ್ಯವಂತ ಜಿಲ್ಲೆ, ಧಾರ್ಮಿಕ ಸಂಸ್ಥೆಯಾದ ಶ್ರೀ ಸಿದ್ಧಗಂಗಾ ಮಠದಿಂದ ಇಡೀ ಜಿಲ್ಲೆಯ ಬಹುತೇಕ ಎಲ್ಲ ತಾಲ್ಲೋಕುಗಳಲ್ಲಿ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಿ ಗ್ರಾಮೀಣ ಬಂಧುಗಳ ವಿದ್ಯಾಭ್ಯಾಸಕ್ಕೆ ಮಾರ್ಗ ವನ್ನು ಮಾಡಿದೆ. ಶೈಕ್ಷಣಿಕ ಕ್ಷೇತ್ರದಲ್ಲಿಯೇ ಕ್ರಾಂತಿಯನ್ನು ಉಂಟು ಮಾಡಿ ಪ್ರತಿ ಗ್ರಾಮೀಣ ವಿದ್ಯಾರ್ಥಿಗಳು ಜೀವನೋಪಾಯವನ್ನು ಕಂಡು ಕೊಳ್ಳುವಂತೆ ಸಹಕರಿಸಿದೆ.

ನಗರ ಕೈಗಾರಿಕೆ ಕ್ಷೇತ್ರದಲ್ಲಿ ಹೊಸ ಅಧ್ಯಾಯವನ್ನೇ ತೆರೆಯಲು ಕಾರಣ ವಾಯಿತು. ಶ್ರೀ ಸಿದ್ಧಗಂಗಾ ಮಠ. ಹೆಚ್.ಎಂ.ಟಿ. ಗಡಿಯಾರ ಕಾರ್ಖಾನೆ ಸ್ಥಾಪನೆಯಾಗುವುದಕ್ಕೆ ಮೊದಲು ಅದಕ್ಕೆ ಅಗತ್ಯವಾಗಿ ಬೇಕಾಗಿದ್ದ ಜಮೀ ನನ್ನು ಬಿಟ್ಟುಕೊಡಲು ಶ್ರೀ ಮಠ ಮುಂದೆ ಬಾರದೇ ಹೋಗಿದ್ದರೆ ಅಂತೆಯೆ ತನ್ನ ಜಮೀನಿನ ಅಕ್ಕಪಕ್ಕದವರ ಜಮೀನನ್ನು ಕೊಡುಂತೆ ಮನಹೊಲಿಸದೇ ಹೋಗಿದ್ದರೆ ಬಹುಶ: ಹೆಚ್.ಎಂ.ಟಿ. ಕಾರ್ಖಾನೆ ಹಾಸನಕ್ಕೊ ಅಥವಾ ಮಂಡ್ಯಕ್ಕೋ ಹೋಗುತ್ತಿತ್ತು. ಕಾರ್ಖಾನೆ ಮುಂಜೂರಾಗಲು ಅಂದು ಲೋಕಸಭಾ ಸದಸ್ಯರಾಗಿದ್ದ ಶ್ರೀ ಕೆ. ಲಕ್ಕಪ್ಪನವರು 1974–75ರಲ್ಲಿ ಶ್ರಮವಹಿಸಿದರು. ಅದು 77–78ರಲ್ಲಿ ಜನತಾ ಸರ್ಕಾರದ ಕಾಲಾವಧಿಯಲ್ಲಿ ಕಾರ್ಯರೂಪಕ್ಕೆ ಬಂದಿತು. ಗಡಿಯಾರದ ಕಾರ್ಖಾನೆ ಪ್ರಾರಂಭವಾದುದರಿಂದ ನಗರದ ಜೀವನ ಹೊಸ ಆಯಾಮವನ್ನೇ ಪಡೆಯಿತು. ಆರ್ಥಿಕವಾಗಿ ಮುಂದು ವರಿಯಲು ಕಾರಣವಾಯಿತು. ವಸತಿ ಸಮಸ್ಯೆ ಹೆಚ್ಚಾದುದರಿಂದ ಹೊಸ ಗೃಹಗಳು ನಿರ್ಮಾಣವಾದುವು. ಎಲ್ಲ ನಿವೇಶನಗಳ ಬೆಲೆ ಒಂದಕ್ಕೆ ನೂರರಷ್ಟು ಹೆಚ್ಚಿತು. ಬ್ಯಾಂಕುಗಳು ಹೆಚ್ಚಾದುವು. ಎಲ್ಲ ಬಾಬುಗಳಿಂದ ಹಣ ತುಮ ಕೂರು ನಗರಕ್ಕೆ ಹರಿದುಬರುವಂತಾಯಿತು. ಚಿಕ್ಕಪುಟ್ಟ ಕೈಗಾರಿಕೆಗಳು ತಲೆಯೆತ್ತಿದವು ಉದ್ಯೋಗಾವಕಾಶಗಳು ಹೆಚ್ಚಿ ಹೆಚ್ಚು ಜನ ನಗರಕ್ಕೆ ಧಾವಿಸಿ ದರು. ಒಂದು ಪಕ್ಷ ಶ್ರೀ ಸಿದ್ಧಗಂಗಾ ಮಠ ಅಂದು ಗಡಿಯಾರ ಕಾರ್ಖಾನೆಗೆ ತನ್ನ 30 ಎಕರೆ ಜಮೀನನ್ನು ಬಿಟ್ಟುಕೊಡಲು ಮುಂದೆಬರದೇ ಹೋಗಿದ್ದರೆ ಇಂದು ಬೃಹತ್ತಾಗಿ ಬೆಳೆಯಲು ಕಾರಣವಾಗುತ್ತಿತ್ತೆ ಎಂಬುದನ್ನು ಆಲೋಚಿಸಬೇಕು.

ಇಂದು ತುಮಕೂರು ನಗರದಲ್ಲಿ ಇಂಜಿನಿಯರಿಂಗ್ ಪದವೀಧರರು ಸರಿಸುಮಾರಾಗಿ ಪ್ರತಿ ಹತ್ತುಮನೆಗಳಿಗೊಬ್ಬರಂತೆ ಇದ್ದಾರೆ. ಇದು ಯಾವುದರ ಫಲ ಎಂಬುದನ್ನು ಆಲೋಚಿಸಬೇಕು. ಶ್ರೀ ಸಿದ್ಧಗಂಗಾ ಮಠ ನಗರ ಜೀವನದಲ್ಲಿ ವಹಿಸಿರುವ ಪಾತ್ರ ಅದ್ಭುತವಾದುದು ಎಂಬುದನ್ನು ಇಲ್ಲಿ ನೆನೆಯಬೇಕು. ಸದ್ದು ಗದ್ದಲವಿರದ ಸೇವೆಗೆ ಹೆಸರಾದ ಶ್ರೀ ಮಠ ನಗರ ಹಾಗು ಜಿಲ್ಲೆಗೆ ಕೊಟ್ಟಿರುವ ಕೊಡುಗೆಯನ್ನು ಸದ್ಭಾವನೆಯಿಂದ ಸ್ಮರಿಸುವ ಸುಸ್ಕೃತಿ ನಾಗರಿಕರ ಕರ್ತವ್ಯವಾಗಿದೆ.

ತುಮಕೂರೆಂದರೆ ಸಿದ್ಧಗಂಗೆ ಸಿದ್ಧಗಂಗೆಯೆಂದರೆ ತುಮಕೂರುಎಂದೇ ಇಂದು ಎಲ್ಲೆಲ್ಲೂ ಕೇಳಿಬರುತ್ತಿರುವ ಮಾತು. ಇದಕ್ಕೆ ಕಾರಣ ಶ್ರೀ ಸಿದ್ಧಗಂಗಾ ಮಠವನ್ನು ಬೆಳೆಸಿದ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು.

**ಸಿದ್ಧಗಂಗಾ ಮಠದ ಭಕ್ತಮಂಡಳಿ**
ತುಮಕೂರು ನಗರ.

# ಸಿದ್ಧಗಂಗಾ ಮಾಸಿಕ ಪತ್ರಿಕೆಯು ಒಡೆತನ ಮತ್ತು ಇತರ ವಿವರಗಳ ಸಂಬಂಧಪಟ್ಟ ಮಾಹಿತಿ

ಫಾರು ೪

೧ ಪ್ರಕಟಣೆಯ ಸ್ಥಳ: ಶ್ರೀ ಸಿದ್ಧಗಂಗಾ ಮಠ
೨ ಪ್ರಕಟವಾಗುವ ಅವಧಿ: ಮಾಸಿಕ
೩ ಮುದ್ರಣ ಭಾಷೆ: ಕನ್ನಡ
೪ ಮುದ್ರಕರ ಹೆಸರು: ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು
ರಾಷ್ಟ್ರೀಯತೆ: ಭಾರತೀಯ
ವಿಳಾಸ: ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲಾ ( ಕರ್ನಾಟಕ )
೫ ಪ್ರಕಾಶಕರ ಹೆಸರು: ಹೆಚ್.ಬಿ. ಗಂಗಾಧರಯ್ಯ
ರಾಷ್ಟ್ರೀಯತೆ: ಭಾರತೀಯ
ವಿಳಾಸ: ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲಾ (ಕರ್ನಾಟಕ)
೬ ಸಂಪಾದಕರು: ಶ್ರೀ ಪಂ॥ ಚನ್ನಪ್ಪ ಎರೇಸೀಮೆ
ರಾಷ್ಟ್ರೀಯತೆ: ಭಾರತೀಯ
ವಿಳಾಸ: ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲಾ (ಕರ್ನಾಟಕ)
೭ ಪತ್ರಿಕೆಯ ಮಾಲೀಕರು: ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲಾ (ಕರ್ನಾಟಕ)
೮ ನೊಂದಣಿ ಸಂಖ್ಯೆ: k. R. S. Q ೯.

ನಾನು ಹೆಚ್. ಬಿ. ಗಂಗಾಧರಯ್ಯ, ಮೇಲಿನ ಅಂಶಗಳೆಲ್ಲ ಸತ್ಯ ಎಂದು ನನ್ನ ಜ್ಞಾನ ಮತ್ತು ನಂಬಿಕೆಗಳಿಂದ ದೃಢಪಡಿಸುತ್ತೇನೆ.

೧ ಮಾರ್ಚಿ/ಏಪ್ರಿಲ್ ೧೯೮೮ (ಸಹಿ) ಹೆಚ್. ಬಿ. ಗಂಗಾಧರಯ್ಯ
ಸಿದ್ಧಗಂಗಾ ಮಠ ಪ್ರಕಾಶಕರು

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ

## ಸಿದ್ಧಗಂಗಾ ಹಳೆಯ ವಿದ್ಯಾರ್ಥಿ ಸಂಘದ "ಆಜೀವ ಸದಸ್ಯತ್ವದ" ಪಟ್ಟಿ.

283. ಶ್ರೀ ಸಿ. ರಾಜಶೇಖರಯ್ಯನವರು ನಂ 123, 4 ನೇ ಮುಖ್ಯ ರಸ್ತೆ ಚಾಮರಾಜಪೇಟೆ. ಬೆಂಗಳೂರು - 560018

284. ಶ್ರೀ ಹೆಚ್. ಸದಾಶಿವಯ್ಯನವರು, ನಿ|| ಉಪಾಧ್ಯಾಯರು. ನಂ 1479, ಪಿಗೂರು ಬಡಾವಣೆ ರಾಮನಗರಂ ಮತ್ತು ಅಂಚೆ, ಬೆಂಗಳೂರು ಜಿಲ್ಲೆ

285. ಶ್ರೀ ಎಸ್. ಚನ್ನಬಸಪ್ಪನವರು. ನಂ 665/10, 5ನೇ ಬ್ಲಾಕ್ 61ನೇ ಕ್ರಾಸ್ ರಸ್ತೆ, ರಾಜಾಜಿನಗರ, ಬೆಂಗಳೂರು -560010

286. ಶ್ರೀ ಎಸ್. ಕಾಂತಪ್ಪನವರು. ನಂ 665/10, 5ನೇ ಬ್ಲಾಕ್ 61ನೇ ಕ್ರಾಸ್ ರಸ್ತೆ ರಾಜಾಜಿನಗರ, ಬೆಂಗಳೂರು - 560010

287. ಶ್ರೀ ವಿ. ಸೋಮಶೇಖರಯ್ಯನವರು. ನಂ 778, 5ನೇ ಮುಖ್ಯ ರಸ್ತೆ 7ನೇ ಕ್ರಾಸ್, ಎಂ.ಸಿ. ಬಡಾವಣೆ ವಿಜಯನಗರ ಬೆಂಗಳೂರು 560040

288. ಶ್ರೀ ಬಿ. ಎಸ್. ಉಮಾಶಂಕರ್ S/o ಬಿ. ಶಿವಣ್ಣ ನಿ|| ಉಪಾಧ್ಯಾಯರು ಬ್ಯಾಲಕೆರೆ, ಮತ್ತು ಅಂಚೆ, ಮಾಗಡಿ ತಾ||

289. ಶ್ರೀ ಬಸಪರಾಜು. ಮುಖ್ಯ ಗುರುಗಳು, ಮಂಜುನಾಥ ಪ್ರೌಢಶಾಲೆ, ಮಾಗಡಿ ರಸ್ತೆ ಬೆಂಗಳೂರು - 560023.

290. ಶ್ರೀ ರಂಗನರಸಯ್ಯ. ಉಪಧ್ಯಾಯರು, ಮಂಜುನಾಥ ಪ್ರೌಢಶಾಲೆ, ಮಾಗಡಿ ರಸ್ತೆ, ಬೆಂಗಳೂರು - 560023

291. ಪಿ. ವಿ. ಹುಚ್ಚವೀರಯ್ಯನವರು. ನಂ 450/ಹೆಚ್, 9ನೇ 'F' ಮುಖ್ಯರಸ್ತೆ ವಿಜಯನಗರ, ಬೆಂಗಳೂರು – 560040

292. ಶ್ರೀ ಜಿ. ಶಿವಣ್ಣನವರು. ನಂ 796, 6ನೇ ಕ್ರಾಸ್, 12ನೇ ಮುಖ್ಯ-ರಸ್ತೆ, ಹನುಮಂತನಗರ, ಬೆಂಗಳೂರು – 560019

293. ಶ್ರೀ ಸಿ. ಎಂ. ಚನ್ನಬಸಪ್ಪನವರು ವಿನಾಯಕ ಕಟ್ಟಡ, ರಾಜೇಂದ್ರನಗರ ಹಾವೇರಿ.

294. ಶ್ರೀ ಕೆ. ಎಸ್. ಸ್ವಾಮಿಯವರು. ಕ|| ಪಂಡಿತರು, ಸರ್ಕಾರಿ ಬಾಲಕರ ಪ್ರೌಢಶಾಲೆ, ದಾವಣಗೆರೆ ಮತ್ತು ಅಂಚೆ.